## 5 ಆಯುರ್ದಾಯ (ದ್ವಿತೀಯಾವೃತ್ತಿ)

ಆಯುರ್ದಾಯ ವಿಭಾಗ, ಮಾರಕಸ್ಥಾನಗಳು, ಮರಣಹೇತು, ಬಾಲಾರಿಷ್ಟ, ಅರಿಷ್ಟಭಂಗಯೋಗಗಳು, ನಿರ್ಯಾಣರಾಶಿಹೇತು, ನಿರ್ಯಾಣಗ್ರಹ, ಯೋಗಜಾಯು, ಅಲ್ಪಾಯು ಮಧ್ಯಾಯು, ದೀರ್ಘಾಯು, ಪೂರ್ಣಾಯು ಇತ್ಯಾದಿ ಆಯುರ್ದಾಯ ವಿಚಾರ, ಅಪಘಾತ, ಅಪಮೃತ್ಯು ಅಕಾಲಮರಣ, ಆತ್ಮಹತ್ಯೆ, ಕೊಲೆ, ವಿಚಿತ್ರಮರಣಯೋಗ ಇತ್ಯಾದಿ ಮಾದರಿ ಜಾತಕರೊಂದಿಗೆ ವಿವರಿಸಿ ಬರೆದಿರುತ್ತದೆ. ದ್ರೇಕ್ಕಾಣಹೇತು, ಮರಣಕಾಲ, ಮರಣಹೇತು, ಮಾರಕದಶಾಭುಕ್ತಿಗಳು, ಮರಣಭೂಮಿ, ಮಾರಕವಿಚಾರ, ಶವಪರಿಣಾಮ, ಪೂರ್ವಜನ್ಮಜ್ಞಾನ, ಪರಲೋಕಪ್ರಾಪ್ತಿ, ಮೋಕ್ಷಯೋಗ ಇತ್ಯಾದಿ ಆಯುರ್ದಾಯ ವಿಚಾರ ಈ ಗ್ರಂಥವು ಆಧಾರಶ್ಲೋಕ ಮತ್ತು 108 ಮಾದರಿ ಜಾತಕಗಳಿಂದ ವಿವರಿಸಿ ಬರೆದಿರುತ್ತದೆ. ಆಯುರ್ದಾಯ ನಿರ್ಣಯಕ್ಕೆ ಉಪಯುಕ್ತ ಆಗುವಂತ ಪ್ರಶ್ನಮಾರ್ಗ ಗ್ರಂಥದ ಹತ್ತನೇ ಅಧ್ಯಾಯ-ನಿರ್ಯಾಣ ಕಾಲ ಚಿಂತನ ನಿರ್ಯಾಣಗ್ರಹ ಗುಳಿಕ ಮತ್ತು ಲಗ್ನಚಿಂತನೆ ಇತ್ಯಾದಿ ವಿಚಾರ ಮತ್ತು ಹನ್ನೊಂದನೇ ಅಧ್ಯಾಯ-ನಿರ್ಯಾಣ ಹೇತು, ಗ್ರಹರ ಧಾತ್ವಾದಿಕಾರಕತ್ವ, ರೋಗನಿರ್ಣಯ, ಬಾಧಾಕೃತಹೇತು ಇತ್ಯಾದಿ ಪ್ರಶ್ನವಿಚಾರ ವಿವರಣೆಯಿಂದ ಕೂಡಿದ ಉಪಯುಕ್ತ ಗ್ರಂಥ.

ಪುಟ : 144 ಬೆಲೆ : ರೂ. 40-00

## 9 ದೈವಜ್ಞ ವರಾಹಮಿಹಿರ ಕೃತ ಲಘು ಜಾತಕ

ದೈವಜ್ಞ ವರಾಹಮಿಹಿರಾಚಾರ್ಯ ಕೃತ ಲಘುಜಾತಕ ಗ್ರಂಥವು ಜ್ಯೋತಿಷಶಾಸ್ತ್ರದ ಅಧ್ಯಯನಕ್ಕೆ, ಬೃಹಜ್ಜಾತಕದಂತೆ ಅತ್ಯಂತ ಉಪಯುಕ್ತ ಗ್ರಂಥ ಆಗಿರುತ್ತದೆ. ರಾಶಿಯ ಗುಣಧರ್ಮಗಳು, ಗ್ರಹಸ್ವರೂಪ, ಕಾರಕತ್ವ, ಗ್ರಹಮಿತ್ರತ್ವಾದಿ, ಆಧಾನಕುಂಡಲಿ, ಸ್ತ್ರೀ-ಪುರುಷ-ಯಮಳಾದಿ ಜನನ, ಜನ್ಮಕಾಲ ಲಕ್ಷಣಾದಿ, ಸದ್ಯೋರಿಷ್ಟ, ಅರಿಷ್ಟಭಂಗ, ಆಯುರ್ದಾಯು, ದಶಾಂತರ್ದಶಾ, ಅಷ್ಟಕವರ್ಗ, ಚಾಂದ್ರಯೋಗ, ಪ್ರವ್ರಜ್ಯಾಯೋಗ, ಭಾವಸ್ಥಿಥ ಗ್ರಹಫಲ, ರಾಜಯೋಗ, ಆಶ್ರಯಯೋಗ, ದಲಯೋಗ, ಆಕೃತಿಯೋಗ, ಸಂಖ್ಯಾಯೋಗ ಮತ್ತು ಯೋಗಜಫಲ, ಸ್ತ್ರೀ ಜಾತಕವಿಚಾರ, ನಿರ್ಯಾಣಾಧ್ಯಾಯ ಮತ್ತು ನಷ್ಟಜಾತಕ ಶೋಧನೆ ಇತ್ಯಾದಿ ವಿಚಾರ ವಿವರಣೆಯಿಂದ ಕೂಡಿರುತ್ತದೆ.

ಪರಾಶರಮುನಿ ಪ್ರಣೀತ ಉಡುದಾಯ ಪ್ರದೀಪ ಅಥವಾ ಲಘು ಪಾರಾಶರೀ ಗ್ರಂಥದ ಮೂಲಶ್ಲೋಕ ಅನುವಾದವನ್ನು ಮತ್ತು ದ್ವಾದಶಲಗ್ನದ ಫಲಾಫಲಚಿಂತನೆಗೆ ಜಾತಕ ಚಂದ್ರಿಕಾ ಗ್ರಂಥದಲ್ಲಿ ಹೇಳಿದ ಗ್ರಹರ ಶುಭಾಶುಭತ್ವ ವಿಚಾರಾದಿಗಳಿಂದ ಕೂಡಿದ ಉಪಯುಕ್ತ ಜ್ಯೋತಿಷಗ್ರಂಥ.

ಪುಟ : 108 ಬೆಲೆ : ರೂ. 27-0

ಜ್ಯೋತಿಷ ಕಾಮಧೇನು ಗ್ರಂಥಮಾಲಾ - 11

# ಭಾ ವೇ ಶ


ಸಂಗ್ರಹ - ಅನುವಾದ
ಗ್ರಂಥಕರ್ತರು

**ಬಿ.ಜಿ. ಆಚಾರ್ಯ**



ಪ್ರಥಮಾವೃತ್ತಿ
1997

ಪ್ರಕಾಶಕರು

ಗಜಾನನ ಪ್ರಕಾಶನ
ಗಣಪತಿ ಹೈಸ್ಕೂಲ್ ಕ್ರೋಸ್‌ರೋಡ್
ಕಾಮಧೇನು ಏಜನ್ಸಿ
ಮಂಗಳೂರು - 575001.

ಬೆಲೆ ರೂ. 48-00

# BHAVESHA – ಭಾವೇಶ

An Astrological Book; with selected Slokas from Parashara Hora, Manasagari & Yavana Jataka, translated in Kannada,

P. P. 8 +173



**Price Rs.** 48-00

First Edition : **1997**

Publishers : **GAJANANA PRAKASHAN**
KAMADHENU AGENCY
G.H.S. Cross Road,
Mangalore - 575 001.

Printers : CODEWORD PROCESS
and
PRINTERS
Falnir, Mangalore - 575 001.

# ಭಾವೇಶಫಲ

## -:: ಅ ನು ಕ್ರ ಮ ಣಿ ಕೆ ::-


| | ವಿಷಯ | | | ಪುಟ |
|---|---|---|---|---|
| | **ಲಗ್ನೇಶಫಲ** | | | **1** |
| 1. | ಲಗ್ನ | ಭಾವಗತ ಲಗ್ನೇಶಫಲ | | 1 |
| 2. | ದ್ವಿತೀಯ | ,, | ,, | 7 |
| 3. | ತೃತೀಯ | ,, | ,, | 9 |
| 4. | ಚತುರ್ಥ | ,, | ,, | 10 |
| 5. | ಪಂಚಮ | ,, | ,, | 11 |
| 6. | ಷಷ್ಠ | ,, | ,, | 12 |
| 7. | ಸಪ್ತಮ | ,, | ,, | 14 |
| 8. | ಅಷ್ಟಮ | ,, | ,, | 17 |
| 9. | ನವಮ | ,, | ,, | 18 |
| 10. | ದಶಮ | ,, | ,, | 19 |
| 11. | ಏಕಾದಶ | ,, | ,, | 20 |
| 12. | ವ್ಯಯ | ,, | ,, | 21 |
| | **ಲಗ್ನಾದಿಭಾವಗತ ಧನೇಶಫಲ** | | | **23** |
| 13. | ಲಗ್ನ | ಭಾವಗತ ಧನೇಶಫಲ | | 23 |
| 14. | ದ್ವಿತೀಯ | ,, | ,, | 24 |
| 15. | ತೃತೀಯ | ,, | ,, | 25 |
| 16. | ಚತುರ್ಥ | ,, | ,, | 26 |
| 17. | ಪಂಚಮ | ,, | ,, | 27 |
| 18. | ಷಷ್ಠ | ,, | ,, | 28 |
| 19. | ಸಪ್ತಮ | ,, | ,, | 29 |
| 20. | ಅಷ್ಟಮ | ,, | ,, | 31 |
| 21. | ನವಮ | ,, | ,, | 32 |
| 22. | ದಶಮ | ,, | ,, | 33 |
| 23. | ಏಕಾದಶ | ,, | ,, | 34 |
| 24. | ವ್ಯಯ | ,, | ,, | 35 |

| | ವಿಷಯ | | | ಪುಟ |
|---|---|---|---|---|
| | **ಲಗ್ನಾದಿಭಾವಗತ ತೃತೀಯೇಶಫಲ** | | | **36** |
| 25. | ಲಗ್ನ | ಭಾವಗತ ತೃತೀಯೇಶಫಲ | | 36 |
| 26. | ದ್ವಿತೀಯ | ,, | ,, | 37 |
| 27. | ತೃತೀಯ | ,, | ,, | 39 |
| 28. | ಚತುರ್ಥ | ,, | ,, | 40 |
| 29. | ಪಂಚಮ | ,, | ,, | 41 |
| 30. | ಷಷ್ಠ | ,, | ,, | 42 |
| 31. | ಸಪ್ತಮ | ,, | ,, | 43 |
| 32. | ಅಷ್ಟಮ | ,, | ,, | 45 |
| 33. | ನವಮ | ,, | ,, | 46 |
| 34. | ದಶಮ | ,, | ,, | 47 |
| 35. | ಏಕಾದಶ | ,, | ,, | 48 |
| 36. | ದ್ವಾದಶ | ,, | ,, | 49 |
| | **ಲಗ್ನಾದಿಭಾವಗತ ಚತುರ್ಥೇಶಫಲ** | | | **51** |
| 37. | ಲಗ್ನ | ಭಾವಗತ ಚತುರ್ಥೇಶಫಲ | | 51 |
| 38. | ದ್ವಿತೀಯ | ,, | ,, | 52 |
| 39. | ತೃತೀಯ | ,, | ,, | 53 |
| 40. | ಚತುರ್ಥ | ,, | ,, | 54 |
| 41. | ಪಂಚಮ | ,, | ,, | 56 |
| 42. | ಷಷ್ಠ | ,, | ,, | 57 |
| 43. | ಸಪ್ತಮ | ,, | ,, | 58 |
| 44. | ಅಷ್ಟಮ | ,, | ,, | 59 |
| 45. | ನವಮ | ,, | ,, | 60 |
| 46. | ದಶಮ | ,, | ,, | 61 |
| 47. | ಏಕಾದಶ | ,, | ,, | 62 |
| 48. | ದ್ವಾದಶ | ,, | ,, | 63 |

| ವಿಷಯ | | | ಪುಟ |
|---|---|---|---|
| | **ಲಗ್ನಾದಿಭಾವಗತ ಪಂಚಮೇಶಫಲ** | | **65** |
| 49. | ಲಗ್ನ | ಭಾವಗತ ಪಂಚಮೇಶಫಲ | 65 |
| 50. | ದ್ವಿತೀಯ | ,, ,, | 66 |
| 51. | ತೃತೀಯ | ,, ,, | 67 |
| 52. | ಚತುರ್ಥ | ,, ,, | 68 |
| 53. | ಪಂಚಮ | ,, ,, | 69 |
| 54. | ಷಷ್ಠ | ,, ,, | 71 |
| 55. | ಸಪ್ತಮ | ,, ,, | 72 |
| 56. | ಅಷ್ಟಮ | ,, ,, | 73 |
| 57. | ನವಮ | ,, ,, | 74 |
| 58. | ದಶಮ | ,, ,, | 75 |
| 59. | ಏಕಾದಶ | ,, ,, | 76 |
| 60. | ವ್ಯಯ | ,, ,, | 77 |
| | **ಲಗ್ನಾದಿಭಾವಗತ ಷಷ್ಠೇಶಫಲ** | | **79** |
| 61. | ಲಗ್ನ | ಭಾವಗತ ಷಷ್ಠೇಶಫಲ | 79 |
| 62. | ದ್ವಿತೀಯ | ,, ,, | 80 |
| 63. | ತೃತೀಯ | ,, ,, | 81 |
| 64. | ಚತುರ್ಥ | ,, ,, | 82 |
| 65. | ಪಂಚಮ | ,, ,, | 83 |
| 66. | ಷಷ್ಠ | ,, ,, | 84 |
| 67. | ಸಪ್ತಮ | ,, ,, | 85 |
| 68. | ಅಷ್ಟಮ | ,, ,, | 86 |
| 69. | ನವಮ | ,, ,, | 91 |
| 70. | ದಶಮ | ,, ,, | 92 |
| 71. | ಏಕಾದಶ | ,, ,, | 93 |
| 72. | ದ್ವಾದಶ | ,, ,, | 94 |

| ವಿಷಯ | | | ಪುಟ |
|---|---|---|---|


| | ಲಗ್ನಾದಿಭಾವಗತ ಸಪ್ತಮೇಶಫಲ | | | **95** |
|---|---|---|---|---|
| 73. | ಲಗ್ನಭಾವಗತ ಸಪ್ತಮೇಶಫಲ | | | 95 |
| 74. | ದ್ವಿತೀಯ | ,, | ,, | 96 |
| 75. | ತೃತೀಯ | ,, | ,, | 97 |
| 76. | ಚತುರ್ಥ | ,, | ,, | 98 |
| 77. | ಪಂಚಮ | ,, | ,, | 99 |
| 78. | ಷಷ್ಠ | ,, | ,, | 100 |
| 79. | ಸಪ್ತಮ | ,, | ,, | 102 |
| 80. | ಅಷ್ಟಮ | ,, | ,, | 103 |
| 81. | ನವಮ | ,, | ,, | 104 |
| 82. | ದಶಮ | ,, | ,, | 105 |
| 83. | ಏಕಾದಶ | ,, | ,, | 106 |
| 84. | ದ್ವಾದಶ | ,, | ,, | 108 |
| | **ಲಗ್ನಾದಿಭಾವಗತ ಅಷ್ಟಮೇಶಫಲ** | | | **109** |
| 85. | ಲಗ್ನ ಭಾವಗತ ಅಷ್ಟಮೇಶಫಲ | | | 109 |
| 86. | ದ್ವಿತೀಯ | ,, | ,, | 110 |
| 87. | ತೃತೀಯ | ,, | ,, | 111 |
| 88. | ಚತುರ್ಥ | ,, | ,, | 113 |
| 89. | ಪಂಚಮ | ,, | ,, | 114 |
| 90. | ಷಷ್ಠ | ,, | ,, | 115 |
| 91. | ಸಪ್ತಮ | ,, | ,, | 117 |
| 92. | ಅಷ್ಟಮ | ,, | ,, | 118 |
| 93. | ನವಮ | ,, | ,, | 119 |
| 94. | ದಶಮ | ,, | ,, | 120 |
| 95. | ಏಕಾದಶ | ,, | ,, | 121 |
| 96. | ದ್ವಾದಶ | ,, | ,, | 122 |

| | ವಿಷಯ | | | ಪುಟ |
|---|---|---|---|---|
| | ಲಗ್ನಾದಿಭಾವಗತ ನವಮೇಶಫಲ | | | 123 |
| 97. | ಲಗ್ನ | ಭಾವಗತ ನವಮೇಶಫಲ | | 123 |
| 98. | ದ್ವಿತೀಯ | " | " | 124 |
| 99. | ತೃತೀಯ | " | " | 125 |
| 100. | ಚತುರ್ಥ | " | " | 126 |
| 101. | ಪಂಚಮ | " | " | 127 |
| 102. | ಷಷ್ಠ | " | " | 128 |
| 103. | ಸಪ್ತಮ | " | " | 129 |
| 104. | ಅಷ್ಟಮ | " | " | 130 |
| 105. | ನವಮ | " | " | 131 |
| 106. | ದಶಮ | " | " | 133 |
| 107. | ಏಕಾದಶ | " | " | 134 |
| 108. | ದ್ವಾದಶ | " | " | 135 |
| | ಲಗ್ನಾದಿಭಾವಗತ ದಶಮೇಶಫಲ | | | 136 |
| 109. | ಲಗ್ನ | ಭಾವಗತ ದಶಮೇಶಫಲ | | 136 |
| 110. | ದ್ವಿತೀಯ | " | " | 137 |
| 111. | ತೃತೀಯ | " | " | 138 |
| 112. | ಚತುರ್ಥ | " | " | 139 |
| 113. | ಪಂಚಮ | " | " | 140 |
| 114. | ಷಷ್ಠ | " | " | 141 |
| 115. | ಸಪ್ತಮ | " | " | 142 |
| 116. | ಅಷ್ಟಮ | " | " | 143 |
| 117. | ನವಮ | " | " | 144 |
| 118. | ದಶಮ | " | " | 145 |
| 119. | ಏಕಾದಶ | " | " | 146 |
| 120. | ದ್ವಾದಶ | " | " | 147 |

| | ವಿಷಯ | | | ಪುಟ |
|---|---|---|---|---|
| | **ಲಗ್ನಾದಿಭಾವಗತ ಲಾಭೇಶಫಲ** | | | **149** |
| 121. | ಲಗ್ನ | ಭಾವಗತ ಲಾಭೇಶಫಲ | | 149 |
| 122. | ದ್ವಿತೀಯ | " | " | 150 |
| 123. | ತೃತೀಯ | " | " | 151 |
| 124. | ಚತುರ್ಥ | " | " | 152 |
| 125. | ಪಂಚಮ | " | " | 153 |
| 126. | ಷಷ್ಠ | " | " | 154 |
| 127. | ಸಪ್ತಮ | " | " | 155 |
| 128. | ಅಷ್ಟಮ | " | " | 156 |
| 129. | ನವಮ | " | " | 157 |
| 130. | ದಶಮ | " | " | 158 |
| 131. | ಏಕಾದಶ | " | " | 159 |
| 132. | ದ್ವಾದಶ | " | " | 160 |
| | **ಲಗ್ನಾದಿಭಾವಗತ ವ್ಯಯೇಶಫಲ** | | | **161** |
| 133. | ಲಗ್ನ | ಭಾವಗತ ವ್ಯಯೇಶಫಲ | | 161 |
| 134. | ದ್ವಿತೀಯ | " | " | 162 |
| 135. | ತೃತೀಯ | " | " | 163 |
| 136. | ಚತುರ್ಥ | " | " | 164 |
| 137. | ಪಂಚಮ | " | " | 165 |
| 138. | ಷಷ್ಠ | " | " | 166 |
| 139. | ಸಪ್ತಮ | " | " | 167 |
| 140. | ಅಷ್ಟಮ | " | " | 168 |
| 141. | ನವಮ | " | " | 169 |
| 142. | ದಶಮ | " | " | 171 |
| 143. | ಏಕಾದಶ | " | " | 172 |
| 144. | ವ್ಯಯ | " | " | 173 |

॥ ಶ್ರೀ ಗಣೇಶಾಯ ನಮಃ ॥

# ಭಾವೇಶಫಲ

## ೧. ಲಗ್ನಾಧಿಭಾವಗತ ಲಗ್ನೇಶಫಲ

### ಲಗ್ನಭಾವಗತ ಲಗ್ನೇಶಫಲ

**ಪರಾಶರಹೋರಾ**

> ಲಗ್ನೇಶೇ ಲಗ್ನಗೇ ದೇಹಸುಖಭಾಗ್ ಶುಭವಿಕ್ರಮಿ ।
> ಮನಸ್ವೀ ಚಂಚಲಶ್ಚೈವ ದ್ವಿಭಾರ್ಯಾ ಪರಗೋಽಪಿ ವಾ ॥

ಲಗ್ನಾಧಿಪತಿಯು ಲಗ್ನದಲ್ಲಿ ಇದ್ದಾಗ ಜಾತಕನು ಹೃಷ್ಟಪುಷ್ಟ ದೇಹದವನು, ಶುಭ, ಪರಾಕ್ರಮಿ, ಚಂಚಲ ಸ್ವಭಾವದವನು, ಎರಡುಪತ್ನಿಯರು ಅಥವಾ ಪರಸ್ತ್ರೀರತನು ಆಗುತ್ತಾನೆ.

**ಮಾನಸಾಗರೀ**

> ಲಗ್ನಾಧಿಪತಿರ್ಲಗ್ನೇ ನೀರೋಗಂ ದೀರ್ಘಜೀವಿನಂ ಕುರುತೇ ।
> ಅತಿಬಲಮವನೀಶಂ ವಾ ಭೂಲಾಭ ಸಮನ್ವಿತಂ ಜಾತಮ್ ॥

ಲಗ್ನಾಧಿಪತಿಯು ಲಗ್ನದಲ್ಲಿ ಇದ್ದಾಗ ಜಾತಕನು ರೋಗರಹಿತನು, ದೀರ್ಘಕಾಲ ಜೀವಿಸುವವನು ಅತಿಬಲಿಷ್ಠನು, ರಾಜನು ಅಥವಾ ಭೂಮಿ ಲಾಭದಿಂದ ಸಂಪನ್ನನು ಆಗುತ್ತಾನೆ.

**ಯವನ ಜಾತಕ**

> ತನುಪತಿಸ್ತನುಗೋ ಮದನಾನುಗೋ ಗತ ರುಜಂ ಕುರುತೇ ಬಹುಜೀವಿತಮ್ ।
> ಅತಿಬಲೋ ನೃಪತೇಃ ಕುಲಮಂತ್ರಿಣಂ ಸುಖವಿಲಾಸಯುತಂ ಸಧನಂ ಸದಾ ॥

ಲಗ್ನಾಧಿಪತಿಯು ಲಗ್ನ ಅಥವಾ ಸಪ್ತಮಭಾವದಲ್ಲಿ ಇದ್ದಾಗ ಜಾತಕನು ರೋಗರಹಿತನು, ಅನೇಕವಿಧದಿಂದ ಜೀವಿಸುತ್ತಾನೆ, ಅತಿಬಲಿಷ್ಠನು, ರಾಜನ ಕುಲಮಂತ್ರಿ, ಸುಖ-ವಿಲಾಸ ಉಳ್ಳವನು ಮತ್ತು ಧನವಂತನು ಆಗುತ್ತಾನೆ.

**ಲೋಮೇಶ ಸಂಹಿತಾ**

> **ಲಗ್ನೇಶೇ ಲಗ್ನಗೇ ಪುಂಸಃ ಸುದೇಹ ಸ್ವಭುಜಾಕ್ರಮಿ ।**
> **ಮನಸ್ವೀ ಚಾತಿಚಾಂಚಲ್ಯೋ ದ್ವಿಭಾರ್ಯಃ ಪರಗಾಮಿ ವಾ ॥**

ಲಗ್ನಾಧಿಪತಿಯು ಲಗ್ನದಲ್ಲಿ ಇದ್ದಾಗ ಜಾತಕನು ಸುಂದರವಾದ ಶರೀರದವನು, ತನ್ನಬಾಹುಬಲದಿಂದ ಪರಾಕ್ರಮವಂತನು, ಅತಿಚಂಚಲ ಸ್ವಭಾವದವನು, ಎರಡುಪತ್ನಿಯರು ಉಳ್ಳವನು ಅಥವಾ ಪರಸ್ತ್ರೀಯೊಂದಿಗೆ ಸಂಬಂಧ ಇರುತ್ತದೆ.

**ಗರ್ಗಸಂಹಿತಾ**

> **ಲಗ್ನಾಧಿಪತಿರ್ಲಗ್ನೇ ನಿರೋಗಂ ದೀರ್ಘಜೀವಿತಂ ಕುರುತೇ ।**
> **ಬಲವಂತಂ ದೃಢಗಾತ್ರಂ ರೂಪಯುತಂ ಬಹು ಪ್ರತಿಷ್ಠಿತಂ ಚೈವ ॥**

ಲಗ್ನಾಧಿಪತಿಯು ಲಗ್ನದಲ್ಲಿ ಇದ್ದಾಗ ಜಾತಕನು ರೋಗರಹಿತನು, ಧೀರ್ಘಾಯುವು, ಬಲಿಷ್ಠನು ಆಗುತ್ತಾನೆ, ಗಟ್ಟಿಯಾದ ಅಂಗಾಂಗಗಳು, ರೂಪವಂತನು, ಬಹು ಪ್ರತಿಷ್ಠಿತನು ಆಗುತ್ತಾನೆ.

**ಲಗ್ನೇಶ ಕುಜನಫಲ**

ಲಗ್ನಾಧಿಪತಿ ಕುಜನು ಮೇಷ ಲಗ್ನದಲ್ಲಿ ಇದ್ದಾಗ ಜಾತಕನಿಗೆ ಆಕರ್ಷಕ ವ್ಯಕ್ತಿತ್ವ, ದೀರ್ಘಯುಯೋಗ, ಆಡಳಿತ, ಉತ್ತಮ ಆರೋಗ್ಯ, ಅಧಿಕಾರ, ಸ್ವಾರ್ಜಿತವಿತ್ತ, ಸದಾಚಾರ, ಸುಖ,-ಮಾನ ಲಭಿಸುತ್ತದೆ, ಮತ್ತು ಭೂಮಿಲಾಭ ಆಗುತ್ತದೆ, ನೂತನ ಉದ್ಯಮ ನಿರ್ವಹಿಸುತ್ತಾನೆ.

ಲಗ್ನಾಧಿಪತಿ ಕುಜನು ವೃಶ್ಚಿಕಲಗ್ನದಲ್ಲಿ ಇದ್ದಾಗ ಜಾತಕನು ಆಕರ್ಷಕ ವ್ಯಕ್ತಿತ್ವ ಮತ್ತು ಆತ್ಮಾಭಿಮಾನ ಉಳ್ಳವನು, ದೀರ್ಘಾಯುವು, ಹಠಸ್ವಭಾವದವನು, ತನ್ನವಾದವನ್ನೇ ಸಮರ್ಥಿಸುವವನು, ವಾಕ್ ಚಾತುರ್ಯ ಉಳ್ಳವನು ಮಾತಿನಲ್ಲಿ ಅನುಭವ ಮತ್ತು ತೀಕ್ಷ್ಣತೆ ಇರುತ್ತದೆ, ಇದರಿಂದ ಕಲಹ ಮತ್ತು ಅಪವಾದ ಸಂಭವಿಸುತ್ತದೆ. ಇವರಿಗೆ ಪತ್ತೇದಾರಿ ಅಥವಾ ಸಂಶೋಧನೆಯಲ್ಲಿ ಅಭಿರುಚಿ ಇರುತ್ತದೆ, ಹಠತನದಿಂದ ಕೆಲವೊಮ್ಮೆ ಅಸಫಲತೆ ಅಥವಾ ಹಾನಿ ಸಂಭವಿಸುತ್ತದೆ.

ಮೇಷ ಮತ್ತು ವೃಶ್ಚಿಕಲಗ್ನಸ್ಥಿತ ಕುಜನಿಂದ ರುಚಕಯೋಗ ಆಗುತ್ತದೆ. ರುಚಕಯೋಗದಲ್ಲಿ ಜನಿಸಿದವನು ಶಾರೀರಿಕ ಬಲ ಉಳ್ಳವನು, ಕೀರ್ತಿ, ಸಂಪತ್ತು ಲಭಿಸುತ್ತದೆ, ಭಾಗ್ಯವಂತನು ಮತ್ತು ಶೀಲವಂತನು ಆಗುತ್ತಾನೆ. ಶಾಸ್ತ್ರಜ್ಞಾನ ಉಳ್ಳವನು, ಮಂತ್ರ, ಜಪ ಮತ್ತು ಅಭಿಚಾರದಲ್ಲಿ ಕುಶಲನು, ರಾಜ ಅಥವಾ ರಾಜತುಲ್ಯನು ಆಗುತ್ತಾನೆ. ಲಾವಣ್ಯವಂತನು, ಕಾಂತಿಯುತನು, ಕೋಮಲವಾದ ಶರೀರದವನು, ತ್ಯಾಗವಂತನು, ಶತ್ರುಗಳನ್ನು ಜಯಿಸಿದವನು, ಧನವಂತನು, ಎಪ್ಪತ್ತು ವರ್ಷ ಆಯುಷ್ಯ ಉಳ್ಳವನು, ಸುಖವಂತನು ಮತ್ತು ಕುದುರೆಗಳಿಂದ ಕೂಡಿದ ಸೇನೆಯ ಅಧಿಪತಿ ಆಗುತ್ತಾನೆ.

## ಲಗ್ನೇಶ ಶುಕ್ರನಫಲ

ವೃಷಭಲಗ್ನದವರಿಗೆ ಲಗ್ನೇಶ ಶುಕ್ರನು ಲಗ್ನದಲ್ಲಿ ಇದ್ದಾಗ ಜಾತಕನು ಸುಂದರನು, ಅಗಲ ಉರುಟಾದ ಮುಖ, ಚತುರ ಮಾತುಗಾರನು, ತನ್ನ ವಾದವನ್ನು ಸಮರ್ಥಿಸುವವನು ಮತ್ತು ಹಠತನ ಉಳ್ಳವನು ಆಗಿರುತ್ತಾನೆ. ಇವರು ಪ್ರಥಮತ: ಸ್ವತಂತ್ರ ಉದ್ಯಮಗಳನ್ನು ನಿರ್ವಹಿಸಿ ಹಾನಿಗೀಡಾಗುತ್ತಾರೆ. ನೌಕರಿ ಅಥವಾ ಏಜನ್ಸಿ, ಕಮಿಶನ್ ವ್ಯಾಪಾರ ಇತ್ಯಾದಿ ಭಂಡವಾಳ ಇಲ್ಲದೆ ನಡೆಸಿದರೆ ಅಭಿವೃದ್ಧಿ ಹೊಂದುತ್ತಾರೆ. ಇವರು ಉತ್ತಮ ಆಡಳಿತಗಾರರು ಆಗುತ್ತಾರೆ. ವೃಷಭ ಲಗ್ನಸ್ಥಿತ ಶುಕ್ರನಿಂದ ಮಾಲವ್ಯಯೋಗ ಆಗುತ್ತದೆ.

ಲಗ್ನೇಶ ಶುಕ್ರನು ತುಲಾಲಗ್ನದಲ್ಲಿ ಇದ್ದಾಗ ಜಾತಕನು ಸುಂದರನು, ಆಕರ್ಷಕ ವ್ಯಕ್ತಿತ್ವ, ವ್ಯಾಪಾರ-ವ್ಯವಹಾರವನ್ನು ಪರಿಸ್ಥಿತಿಗೆ ಹೊಂದಿಕೊಂಡು ಚತುರತೆಯಿಂದ ನಿರ್ವಹಿಸುತ್ತಾರೆ ಹಾಗೂ ಲಾಭಗಳಿಸುತ್ತಾರೆ. ಇವರ ಮಾತಿನಲ್ಲಿ ಗಹನವಾದ ಅರ್ಥ ಇರುತ್ತದೆ, ಸ್ವಾರ್ಜಿತವಿತ್ತ, ಆಕಸ್ಮಾತ್‌ಲಾಭ, ಭೂಮಿ, ತೋಟ, ವಾಹನ ಇತ್ಯಾದಿ ಪಡೆಯುತ್ತಾರೆ, ಪತ್ನಿಯ ಸ್ವಭಾವದಲ್ಲಿ ತೀಕ್ಷ್ಣತೆ ಇರುತ್ತದೆ, ಮಕ್ಕಳು ಬುದ್ಧಿವಂತರು ಆದರೆ ಅವರಲ್ಲಿ ಹಠತನ ಇರುತ್ತದೆ. ತುಲಾಲಗ್ನಸ್ಥಿತ ಶುಕ್ರನಿಂದ ಮಾಲವ್ಯಯೋಗ ಆಗುತ್ತದೆ. ಮಾಲವ್ಯಯೋಗದಲ್ಲಿ ಜನಿಸಿದವನು ಸ್ತ್ರೀಯರಂತೆ ಸ್ವಭಾವದವನು, ಹೃಷ್ಟ-ಪುಷ್ಟ ಅಂಗಾಂಗ, ಸುಂದರದೇಹ, ಸಂಧಿ ಮತ್ತು ಕಣ್ಣುಗಳು ಉಳ್ಳವನು, ಸುಂದರನು, ಗುಣವಂತನು, ತೇಜಸ್ವಿಯು, ಪ್ರಸನ್ನಚಿತ್ತನು, ಪುತ್ರ, ಪತ್ನಿ ಮತ್ತು ವಾಹನಉಳ್ಳವನು, ಧನವಂತನು, ಶಾಸ್ತ್ರಾರ್ಥ ತಿಳಿದ ಪಂಡಿತನು, ಉತ್ಸಾಹವಂತನು, ಒಡೆಯನು,

ಬಲಿಷ್ಠನು, ಮಂತ್ರಬಲ್ಲವನು, ಚತುರನು, ಪ್ರಸಿದ್ಧನು, ತ್ಯಾಗಿಯು, ವಿಲಾಸಿಯು, ಪರಸ್ತ್ರೀರತನು ಮತ್ತು 77 ವರ್ಷ ಆಯುಷ್ಯ ಉಳ್ಳವನು ಆಗುತ್ತಾನೆ.

## ಲಗ್ನೇಶ ಬುಧನಫಲ

ಮಿಥುನಲಗ್ನದವರಿಗೆ ಲಗ್ನೇಶಬುಧನು ಲಗ್ನದಲ್ಲಿ ಇದ್ದಾಗ ಜಾತಕನು ಮಧ್ಯಮ ನಿಲುವಿನವನು, ಬುದ್ಧಿವಂತನು, ಮೇಧಾವಿಯು ಮತ್ತು ಉತ್ತಮ ಸ್ಮರಣಾಶಕ್ತಿ ಉಳ್ಳವನು ಆಗುತ್ತಾನೆ, ಕೈಕೊಂಡ ಕಾರ್ಯಗಳನ್ನು ಯಶಸ್ವಿಯಾಗಿ ಪೂರೈಸುತ್ತಾರೆ, ಇವರು ಕೆಲವು ವಿದ್ಯೆಗಳನ್ನು ಬಲ್ಲವರು, ತನ್ನ ಉದ್ಯೋಗವಲ್ಲದೇ ಇತರ ಕೈಕೆಲಸ ಅಥವಾ ಗುಡಿ ಕೈಗಾರಿಕೆ ಅಥವಾ ಬರವಣಿಗೆ, ಶಿಕ್ಷಣ ಇತ್ಯಾದಿ ನಿರ್ವಹಿಸುತ್ತಾರೆ, ಈ ಲಗ್ನದಲ್ಲಿ ಜನಿಸಿದವರು ಸಾಮಾನ್ಯವಾಗಿ ಮಧ್ಯಪ್ರಾಯದಲ್ಲಿ (28ರಿಂದ 36 ವರ್ಷ), ಜೀವನೋಪಾಯಕ್ಕೆ ಜನ್ಮಸ್ಥಳವನ್ನು ತ್ಯಜಿಸಿ ಪರವೂರಿನಲ್ಲಿ ನೆಲಸಿ ಅಭಿವೃದ್ಧಿ ಹೊಂದುತ್ತಾರೆ. ಪಿತ್ರಾರ್ಜಿತ ಗೃಹ-ಸಂಪತ್ತು ಪೂರ್ಣ ಅನುಭವಿಸಲು ಲಭಿಸುವುದಿಲ್ಲ, ಇವರಿಗೆ ಗಣಿತ ಮತ್ತು ಜ್ಯೋತಿಷಾದಿ ಗೂಢವಿದ್ಯೆಗಳ ಜ್ಞಾನ ಇರುತ್ತದೆ, ತಮ್ಮ ವಾದವನ್ನು ಸಮರ್ಥಿಸುವ ಹಟತನ ಮತ್ತು ಅಧಿಕ ಕೋಪದಿಂದ ಹಾನಿಗೀಡಾಗುತ್ತಾರೆ. ಮಿಥುನ ಲಗ್ನಸ್ಥಿತ ಬುಧನಿಂದ ಭದ್ರಯೋಗ ಆಗುತ್ತದೆ.

ಕನ್ಯಾಲಗ್ನದವರಿಗೆ ಲಗ್ನೇಶಬುಧನು ಲಗ್ನದಲ್ಲಿ ಇದ್ದಾಗ ಜಾತಕನು ಸಾಮಾನ್ಯವಾಗಿ ಮಧ್ಯಮ ನಿಲುವಿನವನು, ಬುದ್ಧಿವಂತನು, ಸದ್ಗುಣವಂತನು, ಸಂಘ-ಸಂಸ್ಥೆಗಳ ಆಡಳಿತಾಧಿಕಾರಿ, ಶಿಕ್ಷಕ, ಗಣಿತದಲ್ಲಿ ನುರಿತವನು, ಲೆಕ್ಕಪರಿಶೋಧಕನು ಅಥವಾ ಆರ್ಥಿಕ ಸಂಸ್ಥೆಯಲ್ಲಿ ಉದ್ಯೋಗದಲ್ಲಿ ಇರುತ್ತಾರೆ, ಇವರಲ್ಲಿ ಅಧಿಕ ಮಮತೆ ಇರುತ್ತದೆ ಮತ್ತು ಪರೋಪಕಾರ ಮಾಡುತ್ತಾರೆ. ಕನ್ಯಾಲಗ್ನಸ್ಥಿತ ಬುಧನಿಂದ ಭದ್ರಯೋಗ ಆಗುತ್ತದೆ.

ಭದ್ರಯೋಗದಲ್ಲಿ ಜನಿಸಿದವನು ಸಿಂಹದ ಮುಖದಂತೆ ಮುಖದವನು, ಆನೆಯ ನಡಿಗೆ, ಉದ್ದ ಉರುಟಾಗಿರುವ ಬಾಹುಗಳು, ವಿಶಾಲವಾದ ಎದೆ, ಸರಿಸಮಾನವಾದ ಅಂಗಾಂಗಗಳು, ಮಾನವಂತನು, ಬಂಧು-ಬಾಂಧವರಿಗೆ ಉಪಕಾರ ಮಾಡುವವನು, ನಿಪುಣನು, ರಾಜನು, ಅತಿಬುದ್ಧಿವಂತನು, ಯಶಸ್ವಿಯು, ಧನವಂತನು ಮತ್ತು ಎಂಭತ್ತು ವರ್ಷ ಆಯುರ್ದಾಯ ಉಳ್ಳವನು ಆಗುತ್ತಾನೆ.

ಕರ್ಕಟಕಲಗ್ನದವರಿಗೆ ಲಗ್ನೇಶಚಂದ್ರನು ಲಗ್ನದಲ್ಲಿ ಇದ್ದಾಗ ಜಾತಕನು ಬಿಳುಪಾದ ಪುಷ್ಟಶರೀರ, ಅಧಿಕಪಿತ್ತ, ಪವಿತ್ರ, ಬುದ್ಧಿವಂತನು, ವಾಚಾಳಿತನ, ಕ್ಷಮಾಗುಣ ಉಳ್ಳವನು, ಧರ್ಮದಲ್ಲಿ ಅಭಿರುಚಿ ಉಳ್ಳವನು, ಸುಖಿವಂತನು, ಚತುರನು, ಧನವಂತನು ಆಗುತ್ತಾನೆ, ಆರ್ಥಿಕ ಪರಿಳಿತ ಇರುತ್ತದೆ, ಭೂಮಿ, ವ್ಯಾಪಾರ ಅಥವಾ ಹಿರಿಯರ ಸಂಪತ್ತಿನ ವಿಚಾರ ಭಿನ್ನಾಭಿಪ್ರಾಯದಿಂದ, ಕೋರ್ಟು ವ್ಯವಹಾರ ಸಂಭವಿಸಿ ದೀರ್ಘಕಾಲದ ನಂತರ ಅಧಿಕ ಖರ್ಚಾಗಿ ಜಯಗಳಿಸುತ್ತಾರೆ.

ಸಿಂಹಲಗ್ನದವರಿಗೆ ಲಗ್ನೇಶರವಿಯು ಲಗ್ನದಲ್ಲಿ ಇದ್ದಾಗ ಜಾತಕನು ಶೂರನು, ರಾಜನು ಅಥವಾ ರಾಜತುಲ್ಯನು, ಆರೋಗ್ಯವಂತನು, ಸ್ವಾಭಿಮಾನ ಉಳ್ಳವನು, ತೀಕ್ಷ್ಣಸ್ವಭಾವದವನು, ಕಣ್ಣಿನಪೀಡೆ ಅಥವಾ ರಾತ್ರೆಕುರುಡುತನ ಉಳ್ಳವನು ಆಗುತ್ತಾನೆ. ಇವರು ನ್ಯಾಯಕ್ಕೋಸ್ಕರ ಹೋರಾಡುತ್ತಾರೆ, ಶರಣಾಗತರಾದವರನ್ನು ರಕ್ಷಿಸುತ್ತಾರೆ, ಸಾಮಾನ್ಯವಾಗಿ ತಮ್ಮಲ್ಲಿ ಸಹಾಯಕೋರಿ ಬಂದವರನ್ನು ತಿರಸ್ಕರಿಸದೆ ಅವರಿಗೆ ಸಹಾಯ ಅಥವಾ ಸೂಕ್ತ ಮಾರ್ಗದರ್ಶನ ನೀಡುತ್ತಾರೆ.

## ಲಗ್ನೇಶ ಗುರುವಿನಫಲ

ಧನುರ್ಲಗ್ನದವರಿಗೆ ಲಗ್ನೇಶ ಗುರುವು ಲಗ್ನದಲ್ಲಿ ಇದ್ದಾಗ ಜಾತಕನು ದೀರ್ಘಾಯುವು ಜ್ಞಾನವಂತನು, ಮೇಧಾವಿಯು, ಧನಿಕನು, ಸದ್ಗುಣವಂತನು, ರೂಪವಂತನು, ಸಂಘ-ಸಂಸ್ಥೆಗಳ ಅಥವಾ ದೇವಾಲಯ ಧಾರ್ಮಿಕ ಸಂಸ್ಥೆಗಳ ಆಡಳಿತ ಅಧಿಕಾರಿ, ಉತ್ತಮ ಮಾರ್ಗದರ್ಶಕನು ಮತ್ತು ಸದಾಚಾರ-ಸತ್ಕರ್ಮದಿಂದ ಕೀರ್ತಿವಂತನು ಆಗುತ್ತಾನೆ, ಮಧ್ಯಪ್ರಾಯದ ನಂತರ ರಾಜಕೀಯದಲ್ಲಿ ಗಣ್ಯವ್ಯಕ್ತಿಯಾಗಿ ಸ್ಥಾನಮಾನಾದಿ ಹೊಂದುತ್ತಾನೆ. ಭೂ ಸಂಪತ್ತು, ನೂತನಮನೆ ಲಭಿಸುತ್ತದೆ, ಉತ್ತಮ ಸಂತಾನ ಮತ್ತು ಭಾಗ್ಯಶಾಲಿ ಆಗುತ್ತಾನೆ. ಲಗ್ನಸ್ಥಿತ ಗುರುವಿನಿಂದ ಜಾತಕನಿಗೆ ಹಂಸಯೋಗ ಆಗುತ್ತದೆ.

ಮೀನಲಗ್ನದವರಿಗೆ ಲಗ್ನೇಶಗುರುವು ಲಗ್ನದಲ್ಲಿ ಇದ್ದಾಗ ಜಾತಕನು ದೀರ್ಘಾಯುವು, ಬುದ್ಧಿವಂತನು, ವಿದ್ಯಾವಂತನು ಮತ್ತು ಉತ್ತಮ ಆಡಳಿತಗಾರನು ಆಗಿರುತ್ತಾನೆ. ಕರ್ಮಕ್ಷೇತ್ರದಲ್ಲಿ ನುರಿತವನು ಮತ್ತು ಕಾರ್ಯಕುಶಲನು ಆಗುತ್ತಾನೆ. ಧನಿಕನು, ಸುರತಪ್ರಿಯನು, ಶ್ರೇಷ್ಠಪಂಡಿತನು,

ವಿಶಾಲವಾದ ದೇಹ, ಪ್ರಚಂಡನು, ಪಿತ್ತಾಧಿಕ್ಯ ಉಳ್ಳವನು ಮತ್ತು ಕೀರ್ತಿವಂತನು ಆಗುತ್ತಾನೆ. ಲಗ್ನಸ್ಥಿತ ಗುರುವಿನಿಂದ ಜಾತಕನಿಗೆ ಹಂಸಯೋಗ ಆಗುತ್ತದೆ.

ಹಂಸಯೋಗದಲ್ಲಿ ಜನಿಸಿದವನು ಕೆಂಪುಬಣ್ಣದ ಮುಖ, ಎತ್ತರವಾದ ಮೂಗು, ಹಂಸದಸ್ವರದಂತೆ ಸ್ವರದವನು, ಕಫಪ್ರಕೃತಿ, ಶುಭ್ರವಾದ ದೇಹ ಮತ್ತು ಸ್ವಚ್ಛವಾದ ಮೈ ಉಳ್ಳವನು, ಸೌಂದರ್ಯವತಿಯಾದ ಪತ್ನಿ, ಕಾಮದೇವನಂತೆ ಸೌಂದರ್ಯವಂತನು, ಸುಖಿವಂತನು, ಶಾಸ್ತ್ರಜ್ಞಾನದಲ್ಲಿ ಶ್ರದ್ಧೆ, ಭಕ್ತಿ ಅಥವಾ ಅತಿಶಯವಾದ ಆಸಕ್ತಿ ಉಳ್ಳವನು, ಅತಿನಿಪುಣನು, ಗುಣವಂತನು, ಉತ್ತಮ ಆಚರಣೆ ಉಳ್ಳವನು ಮತ್ತು 84 ವರ್ಷಕಾಲ ಆಯುರ್ದಾಯ ಅನುಭವಿಸುತ್ತಾನೆ.

## ಲಗ್ನೇಶ ಶನಿಯಫಲ

ಮಕರಲಗ್ನದವರಿಗೆ ಲಗ್ನೇಶ ಶನಿಯು ಲಗ್ನದಲ್ಲಿ ಇದ್ದಾಗ ಜಾತಕನು ಸಾಮಾನ್ಯವಾಗಿ ಸಪುರ, ಉದ್ದ, ಕಪ್ಪುಬಣ್ಣದ ದೇಹದವನು ಆಗಿರುತ್ತಾನೆ, ಇವರ ಸ್ವಭಾವದಲ್ಲಿ ತೀವ್ರತೆ ಮತ್ತು ಅಲ್ಪ-ಸ್ವಲ್ಪ ಹೆದರಿಕೆ ಇರುತ್ತದೆ, ಇವರು ಕಷ್ಟಸಹಿಷ್ಣುಗಳು, ಸತತ ದುಡಿಮೆಯಿಂದ ಪ್ರಗತಿ ಹೊಂದುತ್ತಾರೆ, ಇವರಲ್ಲಿ ಸಂತೋಷ, ಆಲಸ್ಯತನ ಕೋಪ, ಹಠತನ ಸೇಡಿನ ಭಾವನೆ ಇರುತ್ತದೆ, ಆದರೆ ದುಡುಕುವುದಿಲ್ಲ, ಮಾನಸಿಕ ಚಿಂತೆಯಿಂದ ಇವರು ಕೆಲವೊಮ್ಮೆ ಹಾನಿ ಗೀಡಾಗುತ್ತಾರೆ. ಲಗ್ನಸ್ಥಿತ ಶನಿಯಿಂದ ಶಶಯೋಗ ಆಗುತ್ತದೆ.

ಕುಂಭಲಗ್ನದವರಿಗೆ ಲಗ್ನೇಶ ಶನಿಯು ಲಗ್ನದಲ್ಲಿ ಇದ್ದಾಗ ಜಾತಕನು ಬುದ್ಧಿವಂತನು, ವಿದ್ಯಾವಂತನು, ವಾಕ್‌ಚಾತುರ್ಯ ಮತ್ತು ಚತುರತೆಯಿಂದ ಅಭಿವೃದ್ಧಿ ಹೊಂದುತ್ತಾನೆ. ಸ್ವಾರ್ಜಿತ ಧನ-ಸಂಪತ್ತು ಮತ್ತು ಸ್ಥಾನ-ಮಾನ ಪಡೆಯುತ್ತಾನೆ. ದಾಂಪತ್ಯ ಕಲಹ ಅಥವಾ ಪತಿ-ಪತ್ನಿಯಲ್ಲಿ ಭಿನ್ನಾಭಿಪ್ರಾಯ ಇರುತ್ತವೆ, ಶಾರೀರಿಕ ಆಯಾಸ ಅಥವಾ ಅನಾರೋಗ್ಯದಿಂದ ಪೀಡಿಸಲ್ಪಡುತ್ತಾರೆ. ಲಗ್ನಸ್ಥಿತ ಶನಿಯಿಂದ ಶಶಯೋಗ ಆಗುತ್ತದೆ.

ಶಶಯೋಗದಲ್ಲಿ ಜನಿಸಿದವನು ರಾಜನು ಅಥವಾ ಮಂತ್ರಿಯು ಆಗುತ್ತಾನೆ, ವನ-ಪರ್ವತ-ಗುಡ್ಡಪ್ರದೇಶ ಸಂಚಾರದಲ್ಲಿ ಅಭಿರುಚಿ ಉಳ್ಳವನು, ಸೇನಾಪತಿ, ಕ್ರೂರಬುದ್ಧಿಯವನು, ಧಾತುವಿನ ವಿವಾದದಲ್ಲಿ ವಿನೋದಿಯು, ವಂಚನೆಯಲ್ಲಿ ನಿರತನು, ದಾನಿಯು, ಕೋಪಉಳ್ಳದೃಷ್ಟಿ, ತೇಜಸ್ವಿಯು, ಸದಾ ತಾಯಿಯ

ಭಕ್ತಿಯಲ್ಲಿರುವವನು, ಪರಾಕ್ರಮಿಯು, ಶ್ಯಾಮಲ ವರ್ಣದ ಅಂಗದವನು, ಸುಖವಂತನು, ವಿಷಯಾಭಿಲಾಷೆಯಲ್ಲಿ ತತ್ಪರನು ಆಗುತ್ತಾನೆ.

## ೨. ದ್ವಿತೀಯಭಾವಗತ ಲಗ್ನೇಶಫಲ

**ಪರಾಶರ ಹೋರಾ**

**ಲಗ್ನೇಶೇ ಧನಗೇ ಬಾಲೋ ಲಾಭವಾನ್ ಪಂಡಿತ: ಸುಖೀ ।**
**ಸುಶೀಲೋ ಧರ್ಮವಿನ್ಮಾನೀ ಬಹುದಾರೋ ಗುಣೈರ್ಯುತ: ॥**

ಲಗ್ನಾಧಿಪತಿಯು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಲಾಭವಂತನು, ಪಂಡಿತನು, ಸುಖವಂತನು, ಸದ್ಗುಣವಂತನು, ಧಾರ್ಮಿಕ ಅನುಕರಣೆಯವನು, ಮಾನವಂತನು ಮತ್ತು ಹೆಚ್ಚು ಪತ್ನಿಯರು ಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಲಗ್ನಪತಿರ್ಧನಭವನೇ ಧನವಂತಂ ವಿಪುಲಜೀವಿನಂ ಸ್ಥೂಲಮ್ ।**
**ಅತಿಬಲಮವನೀಶಂ ವಾ ಭೂಲಾಭಂ ವಾ ಸುಧರ್ಮರತಂ ಕುರುತೇ ॥**

ಲಗ್ನಾಧಿಪತಿಯು ದ್ವಿತೀಯಭಾವದಲ್ಲಿ ಇದ್ದಾಗ ಜನಿಸಿದವನು ಧನವಂತನು, ದೀರ್ಘಕಾಲ ಜೀವಿಸುವವನು, ಕೊಬ್ಬಿದ ಅಥವಾ ಬೊಜ್ಜು ದೇಹದವನು, ಅತಿ ಬಲಿಷ್ಠನು, ರಾಜನು ಅಥವಾ ಭೂಮಿಲಾಭ ಮತ್ತು ಧರ್ಮದಲ್ಲಿ ತಲ್ಲಿನನು ಆಗುತ್ತಾನೆ.

**ಯವನಜಾತಕ**

**ತನುಪತಿರ್ಧನಭಾವಗತೋ ಭವೇದ್ಧನಯುತಂ ಪೃಥುದೀರ್ಘಶರೀರಿಣಮ್ ।**
**ವಿಲಘುಜೀವಿತ ಮಂತ್ರ ಕುಟುಂಬಿನಂ ವಿವಿಧಧರ್ಮಯುತಂ ಕುರುತೇ ನರಮ್ ॥**

ಲಗ್ನಾಧಿಪತಿಯು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಧನವಂತನು, ಅಗಲವಾಗಿ ಉದ್ದವಾದ ದೇಹ, ದೀರ್ಘಾಯುವು, ಮಂತ್ರಬಲ್ಲವನು, ವಿವಿಧ ಧರ್ಮದವರೊಂದಿಗೆ ಕೂಡಿರುತ್ತಾನೆ.

**ಲೋಮೇಶ ಸಂಹಿತಾ**

ಲಗ್ನಾಧಿಪತಿಯು ದ್ವಿತೀಯ ಅಥವಾ ಲಾಭಭಾವದಲ್ಲಿ ಇದ್ದರೆ ಜಾತಕನಿಗೆ ಅನೇಕ ರೀತಿಯಲ್ಲಿ ಲಾಭಲಭಿಸುತ್ತದೆ, ಪಂಡಿತನು, ಸದ್ಗುಣವಂತನು, ಧಾರ್ಮಿಕತೆ ಉಳ್ಳವನು ಆಗುತ್ತಾನೆ.

**ನಮ್ಮ ಅನುಭವ**

ಲಗ್ನಾಧಿಪತಿಯು ಧನಸ್ಥಾನದಲ್ಲಿ ಇದ್ದಾಗ ಜಾತಕನು ಸ್ವಪ್ರಯತ್ನ ಚತುರತೆ ಅಥವಾ ಪರಿಶ್ರಮದಿಂದ ಧನ-ಸಂಪತ್ತನ್ನು ಗಳಿಸುತ್ತಾನೆ. ಶುಭಗ್ರಹನಾದರೆ ಅಧಿಕ ಪರಿಶ್ರಮವಿಲ್ಲದೆ ಧನ-ಸಂಪತ್ತನ್ನು ಗಳಿಸುತ್ತಾನೆ. ವ್ಯವಹಾರ ಕುಶಲತೆ ಇರುತ್ತದೆ, ಕುಟುಂಬದ ಸುಖ ಮತ್ತು ಏಳಿಗೆಗೆ ಸಹಾಯಕನಾಗುತ್ತಾನೆ, ಉತ್ತಮ ಆಹಾರ ಲಭಿಸುತ್ತದೆ ಮತ್ತು ಸಿಹಿಯಾದ ಮಾತುಗಳನ್ನು ಆಡುತ್ತಾನೆ.

ದ್ವಿತೀಯ ಭಾವಸ್ಥಿತ ಲಗ್ನಾಧಿಪತಿಯು ಪಾಪಗ್ರಹನಾದರೆ ಜಾತಕನು ಪರಿಶ್ರಮದಿಂದ ದುಡಿದು ಕೆಲವೊಮ್ಮೆ ಹಾನಿ ಅಥವಾ ವಂಚನೆಗೆ ಈಡಾಗಿ ಕಷ್ಟ-ನಷ್ಟ ಅನುಭವಿಸುತ್ತಾನೆ. ಮಾತಿನಲ್ಲಿ ತೀಕ್ಷ್ಣತೆ ಕೋಪ ಇರುತ್ತದೆ, ಕಾರ್ಯ-ಕಲಾಪಗಳನ್ನು ಮುಂದೂಡುವ ಸ್ವಭಾವದಿಂದ ಹಾನಿಗೀಡಾಗುತ್ತಾರೆ, ಕುಟುಂಬ ಕಲಹ ಧನ-ಸಂಪತ್ತಿನ ವಾದ-ವಿವಾದದಿಂದ ಕೋರ್ಟು ವ್ಯವಹಾರ ಸಂಭವನೀಯ. ದ್ವಿತೀಯ ಭಾವಸ್ಥಿತ ಈ ಪಾಪಗ್ರಹನು ಗುರುದೃಷ್ಟನಾದರೆ ಅಶುಭಫಲದ ತೀಕ್ಷ್ಣತೆ ಕಡಿಮೆಯಾಗಿ ನಷ್ಟ-ಕಷ್ಟಗಳನ್ನು ಎದುರಿಸಿ ಸತತ ಪ್ರಯತ್ನದಿಂದ ಏಳಿಗೆ ಹೊಂದುತ್ತಾನೆ.

ಸಿಂಹಲಗ್ನದವರಿಗೆ ಲಗ್ನಾಧಿಪತಿ ಸೂರ್ಯನು ದ್ವಿತೀಯ ಭಾವವಾದ ಕನ್ಯಾರಾಶಿಯಲ್ಲಿ ಇದ್ದಾಗ ಜಾತಕನು ಕೋಮಲವಾದ ಶರೀರ, ವಿದ್ಯಾವಂತನು, ಚಿತ್ರಕಲೆ ಅಥವಾ ಪುಸ್ತಕಲೇಖನ, ಮಾತಿನಲ್ಲಿ ಬುದ್ಧಿವಂತಿಕೆ, ಚತುರತೆ ಮತ್ತು ಅಭಿಮಾನ ಇರುತ್ತದೆ. ಸ್ವಾದಿಷ್ಟ ಅನ್ನದಊಟ, ಪಿತ್ರಾರ್ಜಿತ ಭೂಮಿ - ತೋಟ ಲಭಿಸುತ್ತದೆ, ಆದರೆ ಕುಟುಂಬೀಯರ ವಿರೋಧ ಇರುತ್ತದೆ.

ಕರ್ಕಟಕಲಗ್ನದವರಿಗೆ ಲಗ್ನಾಧಿಪತಿಚಂದ್ರನು ದ್ವಿತೀಯ ಭಾವವಾದ ಸಿಂಹರಾಶಿಯಲ್ಲಿ ಇರುವಾಗ ಜನಿಸಿದವನು ಕಷ್ಟಸಾಧ್ಯವಾದ ಕಾರ್ಯಗಳನ್ನು ಮಾಡಬಲ್ಲವನು, ಬೃಹತ್ ಉದ್ಯಮಗಳನ್ನು ನಡಿಸುತ್ತಾನೆ, ಸ್ವಾರ್ಜಿತವಿತ್ತ,

ಧನವಂತನು, ಬುದ್ಧಿವಂತನು, ಕಫಬಾಧೆ ಇರುತ್ತದೆ. ಕ್ಷೀಣ ಚಂದ್ರನಾದರೆ ಬಾಲ್ಯಪ್ರಾಯದಲ್ಲಿ ಕ್ಷಯರೋಗ ಸಂಭವಿಸಬಹುದು. ಮದ್ಯಮಾಂಸ ಪ್ರಿಯನು, ಉತ್ತಮ ಮಿತ್ರರು, ಹೆದರಿಕೆ, ಕ್ರೋಧ ಮತ್ತು ವ್ಯಸನ ಇರುತ್ತದೆ. ತಂದೆ-ತಾಯಿಯಲ್ಲಿ ಪ್ರೇಮ ಮತ್ತು ಭಕ್ತಿ ಉಳ್ಳವನು, ದಾನ-ಧರ್ಮ ಮಾಡುತ್ತಾನೆ, ವೈಧಿಕ ಧರ್ಮದಲ್ಲಿ ನಿಷ್ಠೆ ಉಳ್ಳವನು, ವ್ಯಾಪಾರ-ವ್ಯವಹಾರಕ್ಕಾಗಿ ಆಗಾಗ್ಗೆ ಪ್ರವಾಸದಲ್ಲಿ ಇರುತ್ತಾನೆ, ಸ್ತ್ರೀಯರಿಗಾಗಿ ದುಃಖಿತನು ಮತ್ತು ಅಧಿಕ ಕನ್ಯಾ ಸಂತಾನ ಉಳ್ಳವನು ಆಗಿರುತ್ತಾನೆ.

## ೩. ತೃತೀಯ ಭಾವಗತ ಲಗ್ನೇಶಫಲ

**ಪರಾಶರಹೋರಾ**

**ಲಗ್ನೇಶೇ ಸಹಜೇ ಜಾತಃ ಸಿಂಹತುಲ್ಯ ಪರಾಕ್ರಮಿ ।**
**ಸರ್ವಸಂಪದ್ಯುತೋ ಮಾನೀ ದ್ವಿಭಾರ್ಯೋ ಮತಿಮಾನ್ ಸುಖೀ ॥**

ಲಗ್ನಾಧಿಪತಿಯು ತೃತೀಯ ಭಾವದಲ್ಲಿ ಇದ್ದಾಗ ಜನಿಸಿದವನು ಸಿಂಹದಂತೆ ಪರಾಕ್ರಮದವನು, ಸಕಲ ಸಂಪತ್ತಿನಿಂದ ಕೂಡಿದವನು, ಮಾನವಂತನು ಎರಡು ಪತ್ನಿಯರು, ಬುದ್ಧಿವಂತನು ಮತ್ತು ಸುಖಿವಂತನು ಆಗುತ್ತಾನೆ.

**ಮಾನಸಾಗರೀ**

**ಸಹಜಗತೋ ಲಗ್ನಪತಿಃ ಸದ್ಬಂಧುಪ್ರವರ ಮಿತ್ರ ಪರಿಕಲಿತಮ್ ।**
**ಧರ್ಮರತಂ ದಾತಾರಂ ಶೂರ ಸಬಲಂ ಕರೋತಿ ನರಮ್ ॥**

ಲಗ್ನೇಶನು ತೃತೀಯ ಭಾವದಲ್ಲಿ ಇದ್ದಾಗ ಜನಿಸಿದವನು ಸದ್ಗುಣವಂತರಾದ ಸಹೋದರರು ಮತ್ತು ಉತ್ತಮ ಮಿತ್ರರಿಂದ ಕೂಡಿದವನು, ಧಾರ್ಮಿಕ ಕಾರ್ಯ ಕಲಾಪಗಳಲ್ಲಿ ನಿರತನು, ದಾನಿಯು, ಶೂರನು ಹಾಗೂ ಬಲಿಷ್ಠನು ಆಗುತ್ತಾನೆ.

**ಯವನಜಾತಕ**

**ತನುಪತಿಃ ಸಹಜೇ ಸಹಜಪ್ರದೋ ಭವತಿ ಮಿತ್ರಯುತೋಽಪಿ ಪರಾಕ್ರಮಮ್ ।**
**ಬಲಹತಶ್ಚ ಸದಾ ನ ಪವಿತ್ರತಾಂ ಶುಭವಚಃ ಶುಭದೃಷ್ಟಿವಶಾನ್ನೃಣಾಮ್ ॥**

ಲಗ್ನೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರಿಗೆ ಅಭಿವೃದ್ಧಿ ನೀಡುತ್ತಾನ, ಮಿತ್ರರಿಂದ ಕೂಡಿದಾಗ ಪರಾಕ್ರಮವಂತನು ಆಗುತ್ತಾನೆ, ಲಗ್ನಾಧಿಪತಿಯು ಬಲಹೀನನಾದ್ದಲ್ಲಿ ಯಾವಾಗಲೂ ಪವಿತ್ರತೆ ಇರುವುದಿಲ್ಲ, ಶುಭಗ್ರಹರಿಂದ ನೋಡಲ್ಪಟ್ಟರೆ ಶುಭಮಾತುಗಳನ್ನು ಆಡುತ್ತಾನೆ.

ಅನುಭವದಲ್ಲಿ ತೃತೀಯ ಭಾವವು ಸಾಹಸಸ್ಥಾನ, ದುರಿತಸ್ಥಾನ ಮತ್ತು ಭ್ರಾತೃಸ್ಥಾನ ಆಗಿರುತ್ತದೆ, ತೃತೀಯ ಭಾವಸ್ಥಿತ ಲಗ್ನೇಶನು ಪರಿಶ್ರಮ ಬುದ್ಧಿವಂತಿಕೆ ಮತ್ತು ಸತತ ಪ್ರಯತ್ನದಿಂದ ಏಳಿಗೆ ನೀಡುತ್ತಾನೆ. ಲಗ್ನೇಶನು ಪಾಪಗ್ರಹನಾದರೆ ಕೆಲವೊಮ್ಮೆ ಕಷ್ಟನಷ್ಟಗಳಿಗೀಡಾಗುತ್ತಾನೆ.

ತೃತೀಯೇಶನು ಶುಭಗ್ರಹನಾದರೆ ಜಾತಕನು ಸಹೋದರರ ಏಳಿಗೆಗೆ ಸಹಾಯಕನು ಆಗುತ್ತಾನೆ ಹಾಗೂ ಸಹೋದರರಿಂದ ಆದರಿಸಲ್ಪಡುತ್ತಾನೆ, ಪ್ರಸಿದ್ಧ ವ್ಯಕ್ತಿಯು ಹಾಗೂ ಸನ್ಮಾನಿತನು ಆಗುತ್ತಾನೆ.

## ೪. ಚತುರ್ಥಭಾವಗತ ಲಗ್ನೇಶಫಲ

**ಪರಾಶರಹೋರಾ**

**ಲಗ್ನೇಶೇ ಸುಖಗೇ ಬಾಲಃ ಪಿತೃಮಾತೃಸುಖಾನ್ವಿತಃ ।**
**ಬಹುಭ್ರಾತೃಯುತಃ ಕಾಮೀ ಗುಣರೂಪಸಮನ್ವಿತಃ ॥**

ಲಗ್ನೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆ-ತಾಯಿಯ ಸುಖವನ್ನು ಪಡೆಯುತ್ತಾನೆ, ಜಾತಕನು ಅನೇಕ ಸಹೋದರರು ಉಳ್ಳವನು. ಕಾಮುಕನು, ಗುಣವಂತನು ಮತ್ತು ರೂಪವಂತನು ಆಗಿರುತ್ತಾನೆ.

**ಮಾನಸಾಗರೀ**

**ಲಗ್ನೇಶೇ ತುರ್ಯಗತೇ ನೃಪಪ್ರಿಯಂ ಪ್ರಚುರಜೀವಿತಂ ಕುರುತೇ ।**
**ಸಂಲಬ್ಧಪಿತರಂ ಪಿತ್ರೋ ಭಕ್ತಮಬಹುಭೋಜನಂ ಜಾತಮ್ ॥**

ಲಗ್ನೇಶನು ಚತುರ್ಥಭಾವದಲ್ಲಿ ಇದ್ದಾಗ ಜನಿಸಿದವನು ರಾಜನ ಪ್ರೀತಿಪಾತ್ರನು, ದೀರ್ಘಕಾಲ ಜೀವಿಸುತ್ತಾನೆ, ಪಿತೃಸುಖಿ ಉಳ್ಳವನು, ಹೆತ್ತವರ ಭಕ್ತನು ಮತ್ತು ಅಲ್ಪ ಆಹಾರ-ಊಟಾದಿ ಮಾಡುವವನು ಆಗುತ್ತಾನೆ.

ಯವನಜಾತಕ

> ಸುಖಿಗತೇ ತನುತೇ ತನುಪೇ ಸುಖಂ ವಿವಿಧಭಕ್ಷ ವಿಲಾಸ ಸುಪೂಜಿತಮ್ ।
> ನೃಪತಿಪೂಜ್ಯತಮಂ ಜನನೀಸುಖಂ ಗಜರಥಾಶ್ವಸುಖಂ ಸುರಸಾಶಿನಮ್ ॥

ಲಗ್ನೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ಸುಖಿ, ವಿವಿಧ ಆಹಾರ, ವಿಲಾಸ ಮತ್ತು ಉತ್ತಮ ರೀತಿಯ ಸನ್ಮಾನ ಲಭಿಸುತ್ತದೆ, ರಾಜನಿಂದ ಪೂಜಿತನು, ಮಾತೃಸುಖಿ, ಆನೆ, ರಥ ಮತ್ತು ಕುದುರೆ ಸವಾರಿಯ ಸುಖಿ ಮತ್ತು ಉತ್ತಮ ಆಹಾರವಸ್ತು ಲಭಿಸುತ್ತದೆ.

ಅನುಭವದಲ್ಲಿ ಚತುರ್ಥಭಾವವು ಸುಖಸ್ಥಾನ. ಚತುರ್ಥಭಾವಸ್ಥಿತ ಲಗ್ನೇಶನು ಶುಭಗ್ರಹನಾದರೆ ಜಾತಕನಿಗೆ ಸುಖ-ಸಂತೋಷ, ಮನೆ, ಭೂಮಿ, ವಾಹನಾದಿ ನೀಡುತ್ತಾನೆ, ಜಾತಕನು ದೇವತಾರಾಧನೆ, ದಾನ-ಧರ್ಮಾದಿ ಮಾಡುತ್ತಾನೆ. ಚತುರ್ಥಸ್ಥಿತ ಲಗ್ನೇಶನು ಪಾಪಗ್ರಹನಾದರೆ, ವಾಹನಾದಿಯಿಂದ ನಷ್ಟ, ದಾಯಾದಿಗಳಲ್ಲಿ ಭೂಮಿ-ಸಂಪತ್ತಿನ ವಿವಾದ ಮತ್ತು ಕೋರ್ಟು ವ್ಯವಹಾರದಿಂದ ಹಾನಿಗೀಡಾಗುತ್ತಾರೆ. ಹೃದಯ ವೇದನೆ ತಾಯಿಯೊಂದಿಗೆ ಬೇಧಾಭಿಪ್ರಾಯ, ಕಲಹ ಅಥವಾ ಮಾತೃಸುಖದ ಅಭಾವ ಇರುತ್ತದೆ.

## ೫. ಪಂಚಮಭಾವಗತ ಲಗ್ನೇಶಫಲ

ಪರಾಶರಹೋರಾ

> ಲಗ್ನೇಶೇ ಸುತಗೇ ಜಂತೋಃ ಸುತಸೌಖ್ಯಂ ಚ ಮಧ್ಯಮಮ್ ।
> ಪ್ರಥಮಾಪತ್ಯನಾಶಃ ಸ್ಯಾನ್ಮಾನೀ ಕ್ರೋಧೀ ನೃಪಪ್ರಿಯಃ ॥

ಲಗ್ನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಮಧ್ಯಮತರದ ಸಂತಾನಸೌಖ್ಯ ಲಭಿಸುತ್ತದೆ, ಪ್ರಥಮ ಸಂತಾನ ನಷ್ಟ ಸಂಭವಿಸುತ್ತದೆ, ಮಾನವಂತನು, ಕೋಪ ಉಳ್ಳವನು ಮತ್ತು ರಾಜನ ಪ್ರೀತಿಪಾತ್ರನು ಆಗುತ್ತಾನೆ.

ಮಾನಸಾಗರೀ

> ಪಂಚಮಗೇ ಲಗ್ನಪತೌ ಸುಸುತಂ ಸತ್ಯಾಗಮೀಶ್ವರಂ ವಿದಿತಮ್ ।
> ಬಹುಜೀವಿನಂ ಸುಗೀತಂ ಸುಕರ್ಮನಿರತಂ ಜನಂ ಕುರುತೇ ॥

ಲಗ್ನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಉತ್ತಮ (ಯೋಗ್ಯ) ಸಂತಾನ ಪಡೆಯುತ್ತಾನೆ, ತ್ಯಾಗವಂತನು, ರಾಜನು, ಪ್ರಖ್ಯಾತನು, ದೀರ್ಘಾಯು, ಕೀರ್ತಿವಂತನಾಗಿ ಹೊಗಳಲ್ಪಡುತ್ತಾನೆ ಮತ್ತು ಸತ್ಕರ್ಮನಿರತನು ಆಗಿರುತ್ತಾನೆ.

**ಯವನಜಾತಕ**

**ತನುಪತಿಃ ಸುತಗಸ್ತನುತೇ ಸುತಾನ್ವಿನಯಧರ್ಮಯುತಾನ್ಬಹುಜೀವಿತಾನ್।**
**ವಿದಿತಮಿಶ್ರಖಿಲಃ ಶುಭಕರ್ಮಣಾಂ ಭವತಿ ಗಾನಕಲಾಸು ರತೋ ನರಃ ॥**

ಲಗ್ನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನ ಮಕ್ಕಳು ವಿನಯತೆ ಮತ್ತು ಧಾರ್ಮಿಕತೆಯಿಂದ ಕೂಡಿದವರು, ದೀರ್ಘಾಯುವು ಆಗುತ್ತಾರೆ, ಲಗ್ನೇಶನುಯುತಗ್ರಹತುಲ್ಯ ಶುಭಫಲದಾಯಕನು, ಗಾಯನ ಮತ್ತು ಕಲಾನಿರತನು ಆಗುತ್ತಾನೆ.

ಅನುಭವದಲ್ಲಿ ಪಂಚಮಭಾವವು ಪೂರ್ವಪುಣ್ಯಸ್ಥಾನ ಹಾಗೂ ಸಂತಾನಸ್ಥಾನ ಆಗಿರುತ್ತದೆ, ಲಗ್ನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಯೋಗ್ಯ ಸಂತಾನ ಪಡೆಯುತ್ತಾನೆ. ಆದರೆ ಪ್ರಥಮ ಸಂತಾನನಷ್ಟ ಸಂಭವಿಸಬಹುದು, ಜಾತಕನು ಸದಾಚಾರವಂತನು, ಪಂಡಿತನು, ಮೇಧಾವಿಯು, ಮತ್ತು ದೇವತಾ ಉಪಾಸನೆ ಉಳ್ಳವನು ಆಗುತ್ತಾನೆ.

ಲಗ್ನೇಶನು ಪಾಪಗ್ರಹನಾದರೆ ಜಾತಕನಿಗೆ ಕೋಪ, ಹಠತನ, ತನ್ನ ವಾದವನ್ನು ಸಮರ್ಥಿಸುವ ಛಲಸ್ವಭಾವ, ಉದರವೇದನೆ ಇರುತ್ತದೆ.

ಲಗ್ನೇಶನು ಶುಭಗ್ರಹನಾದರೆ ಜಾತಕನು ಸಂತಾನಪ್ರಾಪ್ತಿಯಾದ ನಂತರ ಅಭಿವೃದ್ಧಿ ಹೊಂದುತ್ತಾನೆ.

## ೬. ಷಷ್ಠಭಾವಗತ ಲಗ್ನೇಶಫಲ

**ಪರಾಶರಹೋರಾ**

**ಲಗ್ನೇಶೇ ಷಷ್ಠಗೇ ಜಾತೋ ದೇಹಸೌಖ್ಯವಿವರ್ಜಿತಃ ।**
**ಪಾಪಾಢ್ಯೇ ಶತ್ರುತಃ ಪೀಡಾ ಸೌಮ್ಯ ದೃಷ್ಟಿ ವಿವರ್ಜಿತೇ ॥**

ಲಗ್ನೇಶನು ಪಾಪಗ್ರಹನಯುತಿಯಲ್ಲಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ದೇಹಸೌಖ್ಯವಿಲ್ಲದವನು ಅಥವಾ ದೇಹಸೌಖ್ಯವನ್ನು ಕಳಕೊಂಡವನು ಆಗುತ್ತಾನೆ, ಈ ಯೋಗವು ಶುಭಗ್ರಹರಿಂದ ನೋಡಲ್ಪಡದೇ ಇದ್ದರೆ ಜಾತಕನು ಶತ್ರುಗಳಿಂದ ಪೀಡಿಸಲ್ಪಡುತ್ತಾನೆ.

**ಮಾನಸಾಗರೀ**

**ರಿಪುಭವನೇ ಲಗ್ನೇಶೇ ನೀರೋಗಂ ಲಬ್ಧಭೂಮಿಂ ಚ ।**
**ಸಬಲಂ ಕೃಪಣಂ ಧನಿನಂ ಸುಕರ್ಮಪಕ್ಷಾನ್ವಿತಂ ಕುರುತೇ ॥**

ಲಗ್ನೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ನಿರೋಗಿಯು (ರೋಗ ರಹಿತನು), ಭೂಮಿಲಾಭ, ಬಲಿಷ್ಠನು, ಕೃಪಣನು, ಧನವಂತನು, ಸತ್ಕರ್ಮ ಮಾಡುವವನು ಮತ್ತು ಸತ್ಕರ್ಮ ಮಾಡುವವರ ಪಕ್ಷದಲ್ಲಿ ಇರುತ್ತಾನೆ.

**ಯವನಜಾತಕ**

**ರಿಪುಗತಸ್ತನುಪಃ ಸ ರಿಪುಂ ನರಂ ಸಹಜಮಾಯುಸುತಂ ಸುಖ ಮಾತುಲಮ್ ।**
**ಪಶು ಕೃತಂ ಜನನೀಸುಖಸಭೃತಂ ಕೃಪಣಮೇವ ಧನೈರ್ವಿಪಿ ಧೈರ್ಯುತಮ್ ॥**

ಲಗ್ನೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಹೆಚ್ಚು ಶತ್ರುಗಳು ಇರುತ್ತಾರೆ, ದೀರ್ಘಾಯುಷ್ಯ ಉಳ್ಳವನು ಪುತ್ರ ಮತ್ತು ಸೋದರಮಾವನ ಸುಖ ಲಭಿಸುತ್ತದೆ. ಪಶುಪಾಲನೆ ಮಾಡುತ್ತಾನೆ, ಮಾತೃಸುಖ ಲಭಿಸುತ್ತದೆ, ಧನವಂತನಾದರೂ ಇವರಲ್ಲಿ ಕೃಪಣತ್ವ ಇರುತ್ತದೆ.

ಅನುಭವದಲ್ಲಿ - ಲಗ್ನೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಹಠತನ ಉಳ್ಳವನು, ತನ್ನ ವಾದವನ್ನು ಸಮರ್ಥಿಸುವವನು ಆಗುತ್ತಾನೆ, ಅಪವಾದ, ದೂಷಣೆ, ಶತ್ರುಪೀಡೆ, ಕಲಹ ಮತ್ತು ಕೋರ್ಟು ವ್ಯವಹಾರ ಸಂಭವಿಸಬಹುದು, ಶುಭಗ್ರಹನಯುತಿ ಅಥವಾ ದೃಷ್ಟಿಯಿಂದ ಸತ್ಕರ್ಮ ಮಾಡುತ್ತಾನೆ, ವಟ್ಟಿ, ಬಡ್ಡಿ, ಭೂಮಿ ವ್ಯವಹಾರ, ಪಶುಪಾಲನೆ ಮೊದಲಾದವುಗಳಿಂದ ಅಭಿವೃದ್ಧಿ ಹೊಂದುತ್ತಾನೆ, ಕೃಪಣತೆ ಇರುತ್ತದೆ, ಸ್ವಾರ್ಜಿತವಿತ್ತ ಉಳ್ಳವನು ಆಗುತ್ತಾನೆ.

# ೭. ಸಪ್ತಮಭಾವಗತ ಲಗ್ನೇಶಫಲ

**ಪರಾಶರಹೋರಾ**

> **ಲಗ್ನೇಶೇ ಸಪ್ತಮೇ ಪಾಪೇ ಭಾರ್ಯಾ ತಸ್ಯ ನ ಜೀವತಿ ।**
> **ಶುಭೇऽಟನೋ ದರಿದ್ರೋ ವಾ ವಿರಕ್ತೋ ವಾ ನೃಪೋऽಪಿ ವಾ ॥**

ಲಗ್ನೇಶನು ಪಾಪಗ್ರಹನಾಗಿ ಸಪ್ತಮಭಾವದಲ್ಲಿ ಇದ್ದರೆ ಜಾತಕನ ಪತ್ನಿಯು ದೀರ್ಘಕಾಲ ಬದುಕುವುದಿಲ್ಲ, ಲಗ್ನಾಧಿಪತಿಯು ಶುಭಗ್ರಹನಾಗಿ ಸಪ್ತಮಭಾವದಲ್ಲಿ ಇದ್ದರೆ ಜಾತಕನು ತಿರುಗಾಟದಲ್ಲಿ ಇರುತ್ತಾನೆ, ಅಥವಾ ಬಡವನು, ಧನವಿಲ್ಲದವನು ಅಥವಾ ವಿರಕ್ತನು ಅಥವಾ ರಾಜನು ಆಗುತ್ತಾನೆ.

**ಮಾನಸಾಗರೀ**

> **ಪ್ರಥಮಪತೌ ಸಪ್ತಮಗೇ ತೇಜಸ್ವೀ ಶೋಕವಾನ್ ಭವೇತ್ಪುರುಷಃ ।**
> **ತದ್ಭಾರ್ಯಾऽಪಿ ಸುಶೀಲಾ ತೇಜಃ ಕಲಿತಾ ಸುರೂಪಾ ಚ ॥**

ಲಗ್ನೇಶನು ಸಪ್ತಮಭಾವದಲ್ಲಿ ಇದ್ದರೆ ಜಾತಕನು ತೇಜಸ್ವಿಯು, ಶೋಕವಂತನು ಆಗುತ್ತಾನೆ, ಆತನ ಪತ್ನಿಯು ಸುಶೀಲಳು, ಒಳ್ಳೇಯ ಸ್ವಭಾವದವಳು, ತೇಜಸ್ವಿಯು, ಸುಂದರ ರೂಪದವಳು ಆಗಿರುತ್ತಾಳೆ.

**ಯವನಜಾತಕ**

> **ಪ್ರಥಮಲಗ್ನಪತಿರ್ಮನುಜಃ ಸ್ತ್ರಿಯಂ ಸುಖಿಧನೈಃ ಶುಭ ಶೀಲ ವಿಲಾಸಿನಮ್ ।**
> **ಸವಿನಯಂ ವನಿತೋಪಯುತಂ ಚ ಹಿ ಸಕಲರೂಪಯುತಂ ಕುರುತೇ ಸದಾ ॥**

ಲಗ್ನೇಶನು ಸಪ್ತಮಭಾವದಲ್ಲಿ ಇದ್ದರೆ ಜಾತಕನಿಗೆ ಸ್ತ್ರೀ, ಸುಖ-ಧನ ಲಭಿಸುತ್ತದೆ, ಉತ್ತಮ ಗುಣವಂತನು, ವಿಲಾಸವಂತನು, ವಿನಯತೆ ಉಳ್ಳವನು, ಸುಂದರ ರೂಪವಂತನು ಆಗಿರುತ್ತಾನೆ.

ಅನುಭವದಲ್ಲಿ ಲಗ್ನೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಅಧಿಕಾರ, ಸ್ವಾರ್ಜಿತವಿತ್ತ ಮತ್ತು ಸ್ಥಾನ-ಮಾನ ಲಭಿಸುತ್ತದೆ, ಆದರೆ ದಾಂಪತ್ಯ ಸುಖಕ್ಕೆ ತೊಡಕು ಉಂಟಾಗುತ್ತದೆ, ದ್ವಿಭಾರ್ಯಾಯೋಗ ಸಂಭವಿಸಬಹುದು.

ಸೂರ್ಯನು ಲಗ್ನೇಶನಾಗಿ (ಸಿಂಹಲಗ್ನ), ಸಪ್ತಮಭಾವದಲ್ಲಿ ಇದ್ದಾಗ (ಕುಂಭರಾಶಿ) ಜಾತಕನಿಗೆ ಪತ್ನಿಯಿಂದ ತಿರಸ್ಕಾರ, ವಿರಹ ಸಂಭವನೀಯ.

ಚಂದ್ರನು ಲಗ್ನೇಶನಾಗಿ (ಕರ್ಕಟಕ ಲಗ್ನ), ಸಪ್ತಮ ಭಾವದಲ್ಲಿ (ಮಕರರಾಶಿ) ಇದ್ದಾಗ ಪತ್ನಿಯ ಮರಣ ಅಥವಾ ದ್ವಿಭಾರ್ಯಾಯೋಗ ಸಂಭವಿಸುತ್ತದೆ, ಪತ್ನಿಯು ಸೌಂದರ್ಯವತಿಯು, ಬುದ್ಧಿವಂತಳು ಮತ್ತು ಗೃಹ ಆಡಳಿತದಲ್ಲಿ ನುರಿತವಳು ಆಗುತ್ತಾಳೆ.

ಕುಜನು ಲಗ್ನೇಶನಾಗಿ (ಮೇಷಲಗ್ನ) ಸಪ್ತಮಭಾವದಲ್ಲಿ (ತುಲಾರಾಶಿ) ಇದ್ದಾಗ ದಾಂಪತ್ಯ ಕಲಹದಿಂದ ದಂಪತಿಗಳಲ್ಲಿ ವಿರಹ ಅಥವಾ ಪತ್ನಿಯ ಮರಣ ಸಂಭವನೀಯ.

ಕುಜನು ಲಗ್ನೇಶನಾಗಿ (ವೃಶ್ಚಿಕಲಗ್ನ) ಸಪ್ತಮಭಾವದಲ್ಲಿ (ವೃಷಭರಾಶಿ) ಇದ್ದಾಗ ದಂಪತಿಗಳಲ್ಲಿ ಕಲಹ, ತಿರಸ್ಕಾರ ಇರುತ್ತದೆ, ಭಿನ್ನಾಭಿಪ್ರಾಯದಿಂದ ಪತ್ನಿಯನ್ನು ತ್ಯಜಿಸುತ್ತಾನೆ. ಆದರೆ ಸಂಧಾನದಿಂದ ಸಂಬಂಧ ಪುನಃ ಕೂಡಿ ಬರುತ್ತದೆ.

ಬುಧನು ಲಗ್ನೇಶನಾಗಿ (ಮಿಥುನಲಗ್ನ) ಸಪ್ತಮಭಾವದಲ್ಲಿ (ಧನುರಾಶಿ) ಇದ್ದಾಗ ಜಾತಕನು ಆಕರ್ಷಕ ವ್ಯಕ್ತಿತ್ವ ಉಳ್ಳವನು, ಧನವಂತನು, ಆರೋಗ್ಯವಂತನು, ದೀರ್ಘಾಯುವು, ಅನೇಕ ವಿದ್ಯೆಗಳನ್ನು ಬಲ್ಲವನು, ಉನ್ನತ ಅಧಿಕಾರ, ಕುಶಲ ಆಡಳಿತಾಧಿಕಾರಿ, ಆರ್ಥಿಕ ಸಂಸ್ಥೆಯಲ್ಲಿ, ಸಾಮಾಜಿಕ ಅಥವಾ ಧಾರ್ಮಿಕ ಸಂಸ್ಥೆಯಲ್ಲಿ ಸೇವೆ ಮಾಡುತ್ತಾನೆ. ವಿವಾಹದ ನಂತರ ಸ್ವಾರ್ಜಿತವಿತ್ತದಿಂದ ನೂತನ ಮನೆ ವಾಹನಾದಿ ಪಡೆಯುತ್ತಾನೆ.

ಬುಧನು ಲಗ್ನೇಶನಾಗಿ (ಕನ್ಯಾಲಗ್ನ) ಸಪ್ತಮಭಾವದಲ್ಲಿ (ಮೀನರಾಶಿ) (ಇದು ಬುಧನ ನೀಚರಾಶಿ) ಇದ್ದಾಗ ಜಾತಕನು ಪ್ರಥಮತಃ ಆರ್ಥಿಕ ಅಥವಾ ವ್ಯಾಪಾರ-ವ್ಯವಹಾರ ಸಂಸ್ಥೆಗಳಲ್ಲಿ ದುಡಿದು ಅಧಿಕಾರ-ಅನುಭವ ಹೊಂದಿ ಅನಂತರ ವ್ಯಾಪಾರ-ವ್ಯವಹಾರದಿಂದ ಧನ-ಸಂಪತ್ತನ್ನು ಗಳಿಸಿ ಅಭಿವೃದ್ಧಿ ಹೊಂದುತ್ತಾರೆ. ಕೀರ್ತಿವಂತರು-ಸುಖಿವಂತರು ಆಗುತ್ತಾರೆ.

ಸಾಮಾನ್ಯವಾಗಿ ಲಗ್ನೇಶಬುಧನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ದಾಂಪತ್ಯಸುಖದಲ್ಲಿ ತೊಡಕು, ವಿರಹ ಅಥವಾ ಪತ್ನಿಯನ್ನು ಕಳಕೊಳ್ಳುತ್ತಾನೆ,

ಸಂಚಾರ ಉದ್ಯೋಗ ಸ್ಥಾನ-ಮಾನ ಲಭಿಸುತ್ತದೆ.

ಗುರುವು ಲಗ್ನೇಶನಾಗಿ (ಧನುರ್ಲಗ್ನ), ಸಪ್ತಮಭಾವದಲ್ಲಿ (ಮಿಥುನರಾಶಿ) ಇದ್ದಾಗ ಜಾತಕನು, ವಿದ್ಯಾವಂತನು, ಮೇಧಾವಿಯು, ಅನುಭವಸ್ಥನು ಮತ್ತು ಉನ್ನತ ಪದವಿ ಪಡೆಯುತ್ತಾನೆ, ಪತ್ನಿಯು ಸದ್ಗುಣವಂತಳು ವಿದ್ಯಾವಂತಳು ಮತ್ತು ಕಲಾಕುಶಲಳು ಆಗುತ್ತಾಳೆ.

ಗುರುವು ಲಗ್ನೇಶನಾಗಿ (ಮೀನಲಗ್ನ), ಸಪ್ತಮಭಾವದಲ್ಲಿ (ಕನ್ಯಾರಾಶಿ) ಇದ್ದಾಗ ಜಾತಕನು ವಿದ್ಯಾವಂತನು, ಉತ್ತಮ ಆಡಳಿತಾಧಿಕಾರಿ, ಹಾಗೂ ಉನ್ನತ ಹುದ್ದೆಯಲ್ಲಿರುತ್ತಾನೆ, ಪರದೇಶ ಅಥವಾ ವಿದೇಶದಲ್ಲಿದ್ದರೆ ಅಭಿವೃದ್ಧಿ ಹೊಂದುತ್ತಾನೆ.

ಶುಕ್ರನು ಲಗ್ನೇಶನಾಗಿ (ವೃಷಭಲಗ್ನ), ಸಪ್ತಮಭಾವದಲ್ಲಿ (ವೃಶ್ಚಿಕರಾಶಿ), ಇದ್ದಾಗ ಜಾತಕನಿಗೆ ದ್ವಿಭಾರ್ಯಾಯೋಗ ಸಂಭವನೀಯ, ಅಥವಾ ದಂಪತಿಗಳಲ್ಲಿ ಭಿನ್ನಾಭಿಪ್ರಾಯ ಕಲಹ ಇರುತ್ತದೆ.

ಶುಕ್ರನು ಲಗ್ನೇಶನಾಗಿ (ತುಲಾಲಗ್ನ) ಸಪ್ತಮಭಾವದಲ್ಲಿ (ಮೇಷರಾಶಿ) ಇದ್ದಾಗ ಜಾತಕನಿಗೆ, ವಿವಾಹ ನಿಷ್ಕರ್ಷೆಯಾಗಿ ಕೈಗೂಡದೆ ಬಿಟ್ಟು ಹೋಗುತ್ತದೆ, ಅನಂತರ ಅಕಸ್ಮಾತ್ ಉತ್ತಮ ಸಂಭಂಧ ಕೂಡಿ ಬರುತ್ತದೆ, ದಂಪತಿಗಳಲ್ಲಿ ಮಾತಿನಿಂದ ಜಗಳ ಇರುತ್ತದೆ, ಶುಕ್ರನು ದೂಷಿತನಾದರೆ ಜಾತಕನು ಅತಿಕಾಮಿಯು ಆಗುತ್ತಾನೆ, ಪಾಲು ವ್ಯಾಪಾರದಲ್ಲಿ ಪಾಲುದಾರರಿಂದ ಹಾನಿಗೀಡಾಗುತ್ತಾನೆ.

ಶನಿಯು ಲಗ್ನೇಶನಾಗಿ (ಮಕರಲಗ್ನ) ಸಪ್ತಮಭಾವದಲ್ಲಿ (ಕರ್ಕಟಕರಾಶಿ) ಇದ್ದಾಗ ಜಾತಕನ ಪತ್ನಿಯು ಬುದ್ಧಿವಂತಳು ಆದರೆ ಕಾರ್ಯ-ಕಲಾಪಗಳ ನಿರ್ವಹಣೆ ನಿಧಾನವಾಗಿ ಮಾಡುತ್ತಾಳೆ, ಪತ್ನಿಯು ಸಪೂರ ದೇಹದವಳು, ಆಯಾಸ ಮತ್ತು ನಿಃಶಕ್ತಿ ಇರುತ್ತದೆ, ದಾಂಪತ್ಯಸುಖ ಮಧ್ಯಮ, ಜಾತಕನು ಜಾಗರೂಕತೆಯಿಂದ ವ್ಯಾಪಾರ-ವ್ಯವಹಾರವನ್ನು ನಿರ್ವಹಿಸದಿದ್ದರೆ ಹಾನಿಗೀಡಾಗುತ್ತಾನೆ, ಸಾಲ ವ್ಯಾಪಾರದಲ್ಲಿ ಸೋಲನ್ನು ಅನುಭವಿಸುತ್ತಾನೆ, ಪಾಲು ವ್ಯಾಪಾರದಲ್ಲಿ ನಷ್ಟ ಸಂಭವಿಸುತ್ತದೆ.

ಶನಿಯು ಲಗ್ನೇಶನಾಗಿ (ಕುಂಭಲಗ್ನ) ಸಪ್ತಮಭಾವದಲ್ಲಿ (ಸಿಂಹರಾಶಿ) ಇದ್ದಾಗ ಜಾತಕನ ಪತ್ನಿಯು ಸ್ವಾಭಿಮಾನ, ಘನಸ್ಥಿಕೆ ಉಳ್ಳವಳು, ಉತ್ತಮ

ಆದಳಿತಗಾರ್ತಿಯು ಆಗಿರುತ್ತಾಳೆ, ಜಾತಕನು ಹಲವು ಹುಡುಗಿಯರನ್ನು ನೋಡಿ ಅನಂತರ ಸಾಮಾನ್ಯ ರೂಪದವಳೊಂದಿಗೆ ವಿವಾಹ ಮಾಡಿಕೊಳ್ಳುತ್ತಾನೆ, ದಂಪತಿಗಳಲ್ಲಿ ವಾದ-ವಿವಾದ ಇರುತ್ತದೆ, ದಾಂಪತ್ಯಸುಖ ತೃಪ್ತಿಕರವಾಗಿರುವುದಿಲ್ಲ, ಜಾತಕನು ಪ್ರಭಾವಶಾಲಿಯಾಗಿ ಉದ್ಯೋಗ ಸಂಸ್ಥೆಯಲ್ಲಿ ಅಥವಾ ಸರಕಾರಿ ಸಂಸ್ಥೆಯಲ್ಲಿ ಉನ್ನತಧಿಕಾರಿಯಾಗಿ ಅಭಿವೃದ್ಧಿ ಹೊಂದುತ್ತಾನೆ, ಉಷ್ಣವಿಕಾರದಿಂದ ಪೀಡಿಸಲ್ಪಡುತ್ತಾನೆ, ಹೊಟ್ಟೆಉರಿ ಇರುತ್ತದೆ, ಮಧ್ಯಪ್ರಾಯದ ನಂತರ ಅಭಿವೃದ್ಧಿ ಹೊಂದಿ ಉನ್ನತ ಸ್ಥಾನ-ಮಾನ ಗಳಿಸುತ್ತಾರೆ.

## ೮. ಅಷ್ಟಮಭಾವಗತ ಲಗ್ನೇಶಫಲ

**ಪರಾಶರಹೋರಾ**

**ಲಗ್ನೇಶೇಽಷ್ಟಮಗೇ ಜಾತಃ ಸಿದ್ಧವಿದ್ಯಾವಿಶಾರದಃ ।**
**ರೋಗೀ ಚೌರೋ ಮಹಾಕ್ರೋಧೀ ದ್ಯೂತೀ ಚ ಪರದಾರಗಃ ॥**

ಲಗ್ನೇಶನು ಅಷ್ಟಮಭಾವದಲ್ಲಿ ಇದ್ದರೆ ಜಾತಕನು ಸಾಧನೆಯಿಂದ ವಿದ್ಯಾವಿಶಾರದನು ಆಗುತ್ತಾನೆ, ರೋಗಿಯು, ಕಳ್ಳತನ ಮಾಡುವವನು, ಹೆಚ್ಚು ಕೋಪ ಉಳ್ಳವನು, ಜೂಜಾಟ ಮತ್ತು ಪರಸ್ತ್ರೀರತನು ಆಗುತ್ತಾನೆ.

**ಮಾನಸಾಗರೀ**

**ಲಗ್ನಪತಾವಷ್ಟಮಗೇ ಕೃಪಣೋ ಧನಸಂಚಯೀ ತು ದೀರ್ಘಾಯುಃ ।**
**ಕ್ರೂರೇ ಖಗೇ ತು ಖೇಚರೇ ಕಾಣಃ ಸೌಮ್ಯೇ ಪುರುಷೋ ಭವೇತ್ಸೌಮ್ಯಃ ॥**

ಲಗ್ನೇಶನು ಅಷ್ಟಮಭಾವದಲ್ಲಿ ಇದ್ದರೆ ಜಾತಕನು ಕೃಪಣನು, ಧನಸಂಗ್ರಹ ಮಾಡುವವನು, ದೀರ್ಘಾಯುಷ್ಯ ಉಳ್ಳವನು, ಲಗ್ನಾಧಿಪತಿಯು ಪಾಪಗ್ರಹನಾದರೆ ಜಾತಕನ ಒಂದು ಕಣ್ಣು ಕುರುಡಾಗಿರುತ್ತದೆ, ಅಥವಾ ದೃಷ್ಟಿದೋಷ ಇರುತ್ತದೆ, ಲಗ್ನಾಧಿಪತಿಯು ಶುಭಗ್ರಹನಾದರೆ, ಜಾತಕನು ಶಾಂತಮನಸ್ಸಿನವನು ಆಗುತ್ತಾನೆ.

**ಯವನಜಾತಕ**

**ಪ್ರಥಮ ಭಾವಪತಿರ್ಮೃತಿಗೋ ಮೃತಿಂ ವಿದಧತೇ ಕೃಪಣಂ ಧನವಂಚಕಮ್ ।**
**ವಿವಿಧ ಕಷ್ಟಯುತಂ ಶುಭದೃಷ್ಟಿತೋ ಭವತಿ ಮಾನ ವಪುಃ ಕೃತವಾನ್ ಸುಧೀಃ ॥**

ಲಗ್ನಾಧಿಪತಿಯು ಅಷ್ಟಮಭಾವದಲ್ಲಿ ಇದ್ದರೆ ಮರಣ ಆಗುತ್ತದೆ, ಜಾತಕನು ಕೃಪಣನು, ಧನವಂಚಕನು ಹಾಗೂ ಅನೇಕ ಕಷ್ಟಗಳನ್ನು ಹೊಂದುತ್ತಾನೆ, ಲಗ್ನೇಶನು ಶುಭಗ್ರಹರಿಂದ ನೋಡಲ್ಪಟ್ಟರೆ ಹೆಚ್ಚು ಮಾನ-ಸನ್ಮಾನ ಲಭಿಸುತ್ತದೆ, ಮತ್ತು ಬುದ್ಧಿವಂತನು ಆಗುತ್ತಾನೆ.

ಅನುಭವದಲ್ಲಿ - ಲಗ್ನಾಧಿಪತಿಯು ಅಷ್ಟಮಭಾವದಲ್ಲಿ ಇದ್ದರೆ ಜಾತಕನು ಬುದ್ಧಿವಂತನು, ಪರಿಸ್ಥಿತಿಗೆ ಅನುಗುಣವಾಗಿ ಹೊಂದಿಕೊಂಡು ಚತುರತೆಯಿಂದ ಕಾರ್ಯನಿರ್ವಹಣೆ ಯಶಸ್ವಿಯಾಗಿ ಮಾಡುತ್ತಾನೆ, ಲಗ್ನೇಶನು ಪಾಪಗ್ರಹನಾದರೆ ಶೀಘ್ರ ಆಲೋಚನೆಯಿಂದ ಕಾರ್ಯನಿರ್ವಹಣೆ ಮಾಡಿದ ನಂತರ ಆತನಿಗೆ ಇನ್ನೂ ಉತ್ತಮ ರೀತಿಯಲ್ಲಿ ಮಾಡಬಹುದಿತ್ತು ಎಂದು ತಿಳಿಯುತ್ತದೆ, ಲಗ್ನೇಶನು ಶುಭಗ್ರಹನಾದರೆ ಜಾತಕನಿಗೆ ಯಶಸ್ಸು ಕೀರ್ತಿ ಮತ್ತು ಧನ-ಸಂಪತ್ತು ಲಭಿಸುತ್ತದೆ, ಅವಸಾನ ಕಾಲದಲ್ಲಿ ಅನಾಯಾಸವಾಗಿ ಪ್ರಾಣ ನಿರ್ಗಮನ ಆಗುತ್ತದೆ.

## ೯. ನವಮಭಾವಗತ ಲಗ್ನೇಶಫಲ

**ಪರಾಶರಹೋರಾ**

**ಲಗ್ನೇಶೇ ಭಾಗ್ಯಗೇ ಜಾತೋ ಭಾಗ್ಯವಾಂಜನವಲ್ಲಭಃ ।**
**ವಿಷ್ಣುಭಕ್ತಃ ಪಟುರ್ವಾಗ್ಮೀ ದಾರಪುತ್ರಧನೈರ್ಯುತಃ ॥**

ಲಗ್ನೇಶನು ಭಾಗ್ಯಭಾವದಲ್ಲಿ ಇದ್ದರೆ ಜಾತಕನು ಭಾಗ್ಯವಂತನು ಜನಪ್ರಿಯನು, ವಿಷ್ಣುಭಕ್ತನು, ನಿಪುಣನು, ಜಾಣನು, ಮಾತನಾಡುವುದರಲ್ಲಿ ಚತುರನು, ಪತ್ನಿ, ಪುತ್ರ ಮತ್ತು ಧನ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಮೂರ್ತಿಪತಿರ್ಯದಿ ನವಮೇ ತದಾಭವತಿ ಪ್ರಚುರಬಾಂಧವಃ ಸುಕೃತಿಃ ।**
**ಸಮಮಿತ್ರಸ್ತು ಸುಶೀಲಃ ಸುಮತೀ ಖ್ಯಾತಃ ಸುತೇಜಸ್ವೀ ॥**

ಲಗ್ನೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಹೆಚ್ಚು ಬಂಧು-ಬಾಂಧವರಿಂದ ಕೂಡಿ ಇರುತ್ತಾನೆ. ಶುಭಕಾರ್ಯಗಳನ್ನು ಮಾಡುತ್ತಾನೆ, ತನ್ನ ಸಮಾನವರ್ಗದ ಜನರೊಂದಿಗೆ ಮಿತ್ರತ್ವ ಮಾಡುತ್ತಾನೆ, ಸದ್ಗುಣವಂತನು,

ಅತಿಶಯ ಅಥವಾ ಒಳ್ಳೇಯ ಬುದ್ಧಿಯವನು, ಪ್ರಖ್ಯಾತನು ಮತ್ತು ತೇಜಸ್ವಿಯು ಆಗುತ್ತಾನೆ.

**ಯವನ ಜಾತಕ**

> ತನುಪಸ್ತಿನುತೇ ತಪಸಾಯುತಂ ಸಹಜ ಮಿತ್ರವದಾನ್ಯ ವಿದೇಶಕೃತ್ ।
> ಸುಖಸುಶೀಲನಿರೇಕಯಶೋನಿಧಿರ್ನೃಪತಿಪೂಜ್ಯತಮೋ ಮನುಜೋ ನೃಣಾಮ್ ॥

ಲಗ್ನೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತಪಸ್ವಿಯು, ಸಹೋದರ ಮತ್ತು ಮಿತ್ರರೊಂದಿಗೆ ಕೂಡಿರುವವನು, ವಿದೇಶ ಪ್ರಯಾಣ, ಸುಖವಂತನು, ಸದಾಚಾರ ಉಳ್ಳವನು, ಯಶಸ್ವಿಯು ಮತ್ತು ರಾಜಪೂಜಿತನು ಆಗುತ್ತಾನೆ.

ಅನುಭವದಲ್ಲಿ - ಲಗ್ನೇಶನು ಭಾಗ್ಯಭಾವದಲ್ಲಿ ಇದ್ದರೆ ಜಾತಕನು ಸದ್ಗುಣವಂತನು, ಬುದ್ಧಿವಂತನು, ತೇಜಸ್ವಿಯು, ಸ್ವಾರ್ಜಿತವಿತ್ತ ಉಳ್ಳವನು, ಹಾಗೂ ದೇವರ ಅನುಗ್ರಹದಿಂದ ಆಯಾಕಾಲದಲ್ಲಿ ಆತನಿಗೆ ಬೇಕಾದ ವಸ್ತು, ಸಲಕರಣೆ, ಧನ, ಭೂಮಿ, ಗೃಹ ಇತ್ಯಾದಿ ಲಭಿಸುತ್ತದೆ, ತೀರ್ಥಯಾತ್ರೆ ಸತ್ಕರ್ಮ, ಸದ್ವಿನಿಯೋಗ, ಗುರು-ದೇವರ ಸೇವೆ, ದಾನ-ಧರ್ಮಾದಿ ಇತ್ಯಾದಿಯಿಂದ ಕೀರ್ತಿವಂತನು, ಸುಖವಂತನು ಆಗುತ್ತಾನೆ.

## ೧೦. ದಶಮಭಾವಗತ ಲಗ್ನೇಶಫಲ

**ಪರಾಶರಹೋರಾ**

> ಲಗ್ನೇಶೇ ದಶಮೇ ಜಾತಃ ಪಿತೃಸೌಖ್ಯಸಮನ್ವಿತಃ ।
> ನೃಪಮಾನ್ಯೋ ಜನೇ ಖ್ಯಾತಃ ಸ್ವಾರ್ಜಿತಸ್ವೋ ನ ಸಂಶಯಃ ॥

ಲಗ್ನೇಶನು ದಶಮಭಾವದಲ್ಲಿ ಇದ್ದರೆ ಜಾತಕನು ಪಿತೃಸುಖ ಉಳ್ಳವನು, ರಾಜನಿಂದ ಸನ್ಮಾನಿತನು, ಜನರಲ್ಲಿ ಪ್ರಖ್ಯಾತನು, ನಿಃಸಂಶಯವಾಗಿ ಸ್ವಾರ್ಜಿತವಿತ್ತ ಇರುತ್ತದೆ.

ಮಾನಸಾಗರೀ

> **ಪ್ರಥಮೇಶೋ ದಶಮಸ್ಥೋ ನೃಪಲಾಭೀ ಪಂಡಿತಃ ಸುಶೀಲಶ್ಚ ।**
> **ಗುರುಮಾತೃಪೂಜನಮತಿರ್ನೃಪ ಪ್ರಸಿದ್ಧಃ ಪುಮಾನ್ ಭವತಿ ॥**

ಲಗ್ನೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಲಾಭ ಹೊಂದುತ್ತಾನೆ, ವಿದ್ವಾಂಸನು, ಸದ್ಗುಣವಂತನು, ಗುರು-ಹಿರಿಯರ ಮತ್ತು ಹೆತ್ತವರ ಪ್ರತಿ ಸದ್ಭಾವನೆ ಮತ್ತು ರಾಜನಲ್ಲಿ ಪ್ರಸಿದ್ಧನು ಆಗುತ್ತಾನೆ.

ಯವನಜಾತಕ

> **ದಶಮಧಾಮಗತೇ ತನುನಾಯಕೇ ಜನಕಮಾತೃಸುಖಂ ನೃಪತೇಃ ಸಮಮ್ ।**
> **ಸಕಲಭೋಗಸುಖಂ ಶುಭಕರ್ಮಣಾಂ ಕವಿವರಂ ಗುರುಪೂಜನಕಂ ವರಮ್ ॥**

ಲಗ್ನೇಶನು ದಶಮಭಾವದಲ್ಲಿ ಇದ್ದರೆ ಜಾತಕನು ತಾಯಿ ಮತ್ತು ತಂದೆಯ ಸುಖ ಉಳ್ಳವನು, ರಾಜತುಲ್ಯನು, ಸಕಲಭೋಗ ಮತ್ತು ಸುಖ ಅನುಭವಿಸುತ್ತಾನೆ, ಶುಭಕಾರ್ಯಗಳನ್ನು ಮತ್ತು ಗುರುಪೂಜನ ಮಾಡುವವನು ಆಗುತ್ತಾನೆ.

ಅನುಭವದಲ್ಲಿ - ಲಗ್ನೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು, ಗುಣವಂತನು, ಪಿತೃಸುಖ ಉಳ್ಳವನು, ಉದ್ಯೋಗ ಕ್ಷೇತ್ರದಲ್ಲಿ ಪರಿಶ್ರಮ ಮತ್ತು ಚತುರತೆಯಿಂದ ಅಭಿವೃದ್ಧಿ ಹೊಂದಿ ಸನ್ಮಾನಿಸಲ್ಪಡುತ್ತಾನೆ, ಗುರು-ಹಿರಿಯರ ಪ್ರೀತಿಪಾತ್ರನು ಉದ್ಯೋಗ ಅಥವಾ ಕರ್ಮಕ್ಷೇತ್ರದಲ್ಲಿ ಪ್ರಸಿದ್ಧನು ಆಗುತ್ತಾನೆ, ಶುಭಸಮಾರಂಭ, ಸತ್ಕರ್ಮ ಸದ್ವಿನಿಯೋಗ ಮಾಡುತ್ತಾನೆ.

## ೧೧. ಏಕಾದಶಭಾವಗತ ಲಗ್ನೇಶಫಲ

ಪರಾಶರಹೋರಾ

> **ಲಗ್ನೇಶೇ ಲಾಭಗೇ ಜಾತಃ ಸದಾ ಲಾಭಸಮನ್ವಿತಃ ।**
> **ಸುಶೀಲಃ ಖ್ಯಾತಕೀರ್ತಿಶ್ಚ ಬಹುದಾರ ಗುಣೈರ್ಯುತಃ ॥**

ಲಗ್ನೇಶನು ಲಾಭಭಾವದಲ್ಲಿ ಇದ್ದರೆ ಜಾತಕನಿಗೆ ಸುಖಜೀವನ, ನಿಶ್ಚಿತಲಾಭ ಪಡೆಯುತ್ತಾನೆ, ಸದ್ಗುಣವಂತನು, ಪ್ರಖ್ಯಾತನು, ಕೀರ್ತಿವಂತನು ಮತ್ತು ಬಹುಪತ್ನಿಯರು ಉಳ್ಳವನು ಆಗುತ್ತಾನೆ.

**ಮಾನಸಾಗರೀ**

> ಏಕಾದಶಸ್ಥ ತನುಪಃ ಸುಜೀವಿತಂ ಸುತಸಮನ್ವಿತಂ ವಿದಿತಮ್ ।
> ತೇಜಃ ಕಲಿತಂ ಕುರುತೇ ಪುರುಷಂ ಬಲಿನಂ ಸುವಾಹನೈರ್ಯುಕ್ತಮ್ ॥

ಲಗ್ನೇಶನು ಲಾಭಭಾವದಲ್ಲಿ ಇದ್ದರೆ ಜಾತಕನಿಗೆ ಸುಖಜೀವನ, ಪುತ್ರರಿಂದ ಕೂಡಿದವನು, ತಿಳುವಳಿಕೆ, ಜ್ಞಾನ ಉಳ್ಳವನು, ಪಂಡಿತನು, ತೇಜಸ್ವಿಯು, ಬಲಿಷ್ಠನು ಮತ್ತು ಉತ್ತಮ ವಾಹನಗಳಿಂದ ಕೂಡಿದವನು ಆಗುತ್ತಾನೆ.

**ಯವನ ಜಾತಕ**

> ಸುಬಹುಜೀವಿತ ಆಯಗತೇ ನರಸ್ತನುಪತೌ ಶುಭಭಾವ ಸಮನ್ವಿತೇ ।
> ಗಜರಥಾಶ್ವಸಕೋಶನೃಪಾತ್ಸುಖಂ ವಿವಿಧ ಕೀರ್ತಿವಿವೇಕ ವಿಚಾರಣಃ ॥

ಲಗ್ನೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುಷ್ಯ ಉಳ್ಳವನು ಹಾಗೂ ಶುಭಗ್ರಹರ ರಾಶಿಯಲ್ಲಿ ಇದ್ದರೆ ಆನೆ, ಕುದುರೆ ಮತ್ತು ರಾಜನಿಂದ ಧನ, ಸುಖ ಮತ್ತು ವಿವಿಧ ರೀತಿಯಲ್ಲಿ ಕೀರ್ತಿ ಲಭಿಸುತ್ತದೆ, ಹಾಗೂ ವಿವೇಕ ಮತ್ತು ವಿಚಾರವಂತನು ಆಗಿರುತ್ತಾನೆ.

ಅನುಭವದಲ್ಲಿ ಲಗ್ನೇಶನು ಲಾಭಭಾವದಲ್ಲಿ ಇದ್ದಾಗ ಉತ್ತಮ ಗುಣದವನು, ಜ್ಞಾನವಂತನು, ಪಂಡಿತನು, ವಾಹನ ಮತ್ತು ಸೇವಕರು ಉಳ್ಳವನು, ವಿವೇಕ ಮತ್ತು ವಿಚಾರವಂತನು, ಸ್ವಾರ್ಜಿತವಿತ್ತ ಉಳ್ಳವನು ಮತ್ತು ಕೀರ್ತಿವಂತನು ಆಗುತ್ತಾನೆ. ಸಂತಾನ ಸುಖ ಮತ್ತು ದೀರ್ಘಾಯುಷ್ಯ ಉಳ್ಳವನು ಆಗುತ್ತಾನೆ.

## ೧೨. ವ್ಯಯಭಾವಗತ ಲಗ್ನೇಶಫಲ

**ಪರಾಶರ ಹೋರಾ**

> ಲಗ್ನೇಶೇ ವ್ಯಯಭಾವಸ್ಥೇ ದೇಹಸೌಖ್ಯವಿವರ್ಜಿತಃ ।
> ವ್ಯರ್ಥವ್ಯಯೀ ಮಹಾಕ್ರೋಧೀ ಶುಭದೃಗ್ ಯೋಗವರ್ಜಿತೇ ॥

ಲಗ್ನೇಶನು ಶುಭಗ್ರಹರ ದೃಷ್ಟಿ ಅಥವಾ ಯುತಿ ಇಲ್ಲದೆ ವ್ಯಯಭಾವದಲ್ಲಿ ಇದ್ದರೆ ಜಾತಕನು ದೇಹಸೌಖ್ಯ ಕಳಕೊಂಡವನು, ಪ್ರಯೋಜನವಿಲ್ಲದ ವ್ಯಯ ಮತ್ತು ಅಧಿಕಕ್ರೋಧ ಉಳ್ಳವನು ಆಗುತ್ತಾನೆ.

ಮಾನಸಾಗರೀ

ದ್ವಾದಶಗೇ ಮೂರ್ತಿಪತೌ ಕುಟುಕವತ್ ಕರ್ಮಪರೋಽಶುಭೋ ನೀಚಃ ।
ಮಾನೀ ಸಹಗ್ರೋತ್ರಿಭಿರ್ವಿದೇಶಗೋ ದತ್ತಭಕ್ತನರಃ ।

ಲಗ್ನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಕಟುಕನಂತೆ ಕರ್ಮ ನಿರ್ವಹಿಸುತ್ತಾನೆ, ಅಶುಭತೆ, ನೀಚತ್ವ, ತನ್ನ ಗೋತ್ರದವರಲ್ಲಿ ಅಭಿಮಾನ ಉಳ್ಳವನು ವಿದೇಶಪ್ರಯಾಣ ಮತ್ತು ಪರಾನ್ನ ತಿನ್ನುತ್ತಾನೆ.

ಯವನಜಾತಕ

ತನುಪತಿರ್ವ್ಯಯಗಃ ಕಟುವಾಕ್ಯಮಾನ್ಯಲಸಮಾಮುದಾಹಕರೋ ಘೃಣೀ ।
ವ್ಯಯಕರಃ ಸಹಜಃ ಪರದೇಶಗಃ ಸಹಜಗೋತ್ರರಿಪುರ್ಹ್ಯರಿ ಸಂಯುತಃ ॥

ಲಗ್ನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಕಟುಭಾಷಿ (ತೀಕ್ಷ್ಣವಾದ ಮಾತುಗಳನ್ನು ಆಡುವವನು), ದುಷ್ಟರೊಂದಿಗೆ ಕೂಡುತ್ತಾನೆ. ಸಂತಾಪ ಉಳ್ಳವನು, ದಯಾವಂತನು, ಹಣಖರ್ಚು ಮಾಡುವವನು, ವಿದೇಶ ಸಂಚಾರ, ಸಹೋದರರ, ಗೋತ್ರಜ ಜನರ ಶತ್ರುವು ಮತ್ತು ಶತ್ರುಗಳಿಂದ ಕೂಡಿದವನು ಆಗುತ್ತಾನೆ.

ಅನುಭವದಲ್ಲಿ - ಲಗ್ನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಶಾರೀರಿಕ ಆಯಾಸ, ಕಾಲುನೋವು, ಅಧಿಕ ಖರ್ಚು ಪಾಪಗ್ರಹನಾದರೆ ಅನಾವ್ರಯ, ಹಣ ಕಳೆದುಹೋಗುವುದು, ಅಥವಾ ಜ್ಯಾಮಿನು ವ್ಯವಹಾರದಿಂದ ನಷ್ಟ, ದೇಶ-ವಿದೇಶ ಸಂಚಾರ, ಲಗ್ನೇಶನು ಶುಭಗ್ರಹನಾದರೆ ತೀರ್ಥಯಾತ್ರೆ, ಸತ್ಕರ್ಮ, ಸದ್ವಿನಿಯೋಗ ಮಾಡುತ್ತಾನೆ.

# ೧೩. ಲಗ್ನಾದಿಭಾವಗತ ಧನೇಶಫಲ

## ಲಗ್ನಭಾವಗತ ಧನೇಶಫಲ

**ಪರಾಶರಹೋರಾ**

**ಧನೇಶೇ ಲಗ್ನಗೇ ಜಾತಃ ಪುತ್ರವಾನ್ ಧನಸಂಯುತಃ ।**
**ಕುಟುಂಬಕಂಟಕಃ ಕಾಮೀ ನಿಷ್ಠುರಃ ಪರಕಾರ್ಯಕೃತ್ ॥**

ಧನೇಶನು ಲಗ್ನಭಾವದಲ್ಲಿ ಇದ್ದರೆ ಜಾತಕನು ಪುತ್ರವಂತನು, ಧನವಂತನು, ತನ್ನ ಕುಟುಂಬಕ್ಕೆ ಕಂಟಕನು, ಕಾಮಿಯು, ಕಠಿಣವಾದ ಅಥವಾ ನಿಂದನೀಯ ಮಾತುಗಳನ್ನು ಆಡುವವನು ಮತ್ತು ಪರಕಾರ್ಯ ಮಾಡುವವನು ಆಗುತ್ತಾನೆ.

**ಮಾನಸಾಗರೀ**

**ದ್ರವ್ಯಪತಿರ್ಲಗ್ನಗತಃ ಕೃಪಣಂ ವ್ಯವಸಾಯಿನ ಸುಕರ್ಮಾಣಮ್ ।**
**ಧನಿನ ಶ್ರೀಪತಿವಿದಿತ ಕರೋತಿ ನರಮತುಲ ಭೋಗಯುತಮ್ ॥**

ಧನೇಶನು ಲಗ್ನಭಾವದಲ್ಲಿ ಇದ್ದರೆ ಜಾತಕನು ಕೃಪಣನು, ಉದ್ಯೋಗ ಶೀಲನು, ವಾಣಿಜ್ಯ ವೃತ್ತಿಯವನು, ಸತ್ಕರ್ಮ ಮಾಡುವವನು, ಧನಿಕನು ಮತ್ತು ಧನಿಕರಲ್ಲಿ ಪ್ರಸಿದ್ಧನು ಹಾಗೂ ಅತುಲಭೋಗಯುತನು ಆಗುತ್ತಾನೆ.

**ಯವನಜಾತಕ**

**ದ್ರವ್ಯಾಧಿಪೇ ಲಗ್ನಗತೇ ಧನೀ ಸ್ಯಾದ್ವ್ಯಾಪಾರವೃತ್ತಿಃ ಕೃಪಣೋಽತಿಭೋಗಿ ।**
**ಸುಖಾನ್ವಿತೋ ಭೂಪತಿಸತ್ಕೃತೋ ಭವೇತ್ಸುಕರ್ಮಕೃತ್ಸುಂದರನೇತ್ರ ಪತ್ನೀ ॥**

ಧನೇಶನು ಲಗ್ನಭಾವದಲ್ಲಿ ಇದ್ದರೆ, ಜಾತಕನು ಧನವಂತನು, ವ್ಯಾಪಾರ ವೃತ್ತಿಯವನು, ಕೃಪಣನು, ಅತಿಭೋಗವಂತನು, ಸುಖ ಉಳ್ಳವನು, ರಾಜರಿಂದ ಸನ್ಮಾನಿತನು, ಸತ್ಕರ್ಮ ಮಾಡುವವನು ಮತ್ತು ಅವನ ಪತ್ನಿಯು ಸುಂದರ ಕಣ್ಣುಗಳು ಉಳ್ಳವಳು ಆಗಿರುತ್ತಾಳೆ.

ಅನುಭವದಲ್ಲಿ - ಧನೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ವಾಕ್‌ಚಾತುರ್ಯದಿಂದ ಧನ-ಸಂಪತ್ತನ್ನು ಗಳಿಸುತ್ತಾನೆ, ಸತ್ಕರ್ಮ-

ಸದ್ವಿನಿಯೋಗ ಮಾಡುತ್ತಾನೆ, ವ್ಯಾಪಾರ ವ್ಯವಹಾರದಲ್ಲಿ ಬುದ್ಧಿವಂತನು, ಸಮಾಜದಲ್ಲಿ ಗಣ್ಯವ್ಯಕ್ತಿಯಾಗಿರುತ್ತಾನೆ, ಸುಖವಂತನು ಆಗುತ್ತಾನೆ, ಸಂತಾನ ಸುಖ ಉಳ್ಳವನು ಮತ್ತು ಕುಟುಂಬದ ಏಳಿಗೆಗೆ ಸಹಾಯಕನು ಆಗುತ್ತಾನೆ, ಧನೇಶನು ಪಾಪಗ್ರಹನಾಗಿ ಲಗ್ನದಲ್ಲಿದ್ದಾಗ ಕುಟುಂಬ ಕಲಹ ಮತ್ತು ಪರಕಾರ್ಯ ಮಾಡುವವನಾಗುತ್ತಾನೆ.

## ೧೪. ದ್ವಿತೀಯಭಾವಗತ ಧನೇಶಫಲ

**ಪರಾಶರಹೋರಾ**

> ಧನೇಶೇ ಧನಗೇ ಜಾತೋ ಧನವಾನ್ ಗರ್ವಸಂಯುತಃ ।
> ದ್ವಿಭಾರ್ಯೋ ಬಹುಭಾರ್ಯೋ ವಾ ಸುತಹೀನಃ ಪ್ರಜಾಯತೇ ॥

ಧನೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಶ್ರೀಮಂತನು, ಗರ್ವ ಹೊಂದುವವನು, ಅಹಂಕಾರ ಪಡುವವನು, ಎರಡು ಅಥವಾ ಹೆಚ್ಚು ಹೆಂಡತಿಯರು ಉಳ್ಳವನು ಅಥವಾ ಸಂತಾನ ಇಲ್ಲದವನು ಆಗುತ್ತಾನೆ.

**ಮಾನಸಾಗರೀ**

> ವ್ಯವಸಾಯೀ ಚ ಸುಲಾಭೀ ಹ್ಯುತ್ಪನ್ನಭುಗಲೀಕಕಾರಕೋ ನೀಚಃ ।
> ನಾಲೀಕಕೃದ್ವಿದಿತೋಽಪಿ ಚ ಪೂರ್ಣೋದ್ವೇಗೀ ಧನಪತೌ ಧನಗೇ ॥

ಧನೇಶನು ದ್ವಿತೀಯಭಾವದಲ್ಲಿ ಇದ್ದರೆ ಜಾತಕನು ವ್ಯಾಪಾರಿಯು ಮತ್ತು ಉತ್ತಮ ಲಾಭವನ್ನು ಗಳಿಸುತ್ತಾನೆ, ಉತ್ಪನ್ನ ವಸ್ತುವಿನ ಉಪಭೋಗ ಮಾಡುವವನು, ಅಪ್ರಿಯವಾದ ಅಥವಾ ಅಸತ್ಯವಾದ ವ್ಯವಹಾರ ಮಾಡುವವನು, ನೀಚತನ ಉಳ್ಳವನು, ಸತ್ಯವಾದಿಯ ರೂಪದಲ್ಲಿ ವಿಖ್ಯಾತನು ಮತ್ತು ಉದ್ವಿಗ್ನತೆ ಉಳ್ಳವನು ಆಗಿರುತ್ತಾನೆ.

**ಯವನಜಾತಕ**

> ದ್ರವ್ಯಾಧಿಪೇ ದ್ರವ್ಯಗತೇ ಧನೀ ಸ್ಯಾತ್ಸುಮಾನ್ಯವೇಲ್ಲಾಭಯುತೋಽಪಿ ಮಂತ್ರೀ ।
> ಕುಟುಂಬಯುಕ್ತೋ ಮಣಿರತ್ನಭೋಗಿ, ವಿಭೂಷಿತೋ ಭೋಗಯುತೋ ಜಿತೇಂದ್ರಿಯಃ ॥

ಧನೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಧನಿಕನು, ಲಾಭ ಪಡೆಯುತ್ತಾನೆ, ಮಂತ್ರಿ, ಕುಟುಂಬದವರೊಂದಿಗೆ ಕೂಡಿರುವವನು, ಮಣಿ, ರತ್ನ ಪಡೆಯುತ್ತಾನೆ, ಒಡವೆಗಳಿಂದ ಅಲಂಕರಿಸಲ್ಪಟ್ಟವನು, ಭೋಗವಂತನು ಮತ್ತು ಜಿತೇಂದ್ರಿಯನು ಆಗುತ್ತಾನೆ.

ಅನುಭವದಲ್ಲಿ - ಧನೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಧನ-ಸಂಪತ್ತು ಉಳ್ಳವನು, ವ್ಯಾಪಾರ-ವ್ಯವಹಾರ ಕುಶಲನು, ಚತುರ ಮಾತುಗಾರನು, ಸುಖವಂತನು ಆಗುತ್ತಾನೆ, ಧನೇಶನು ಪಾಪಗ್ರಹನಾದರೆ, ಅಹಂಕಾರ, ದ್ವಿಭಾರ್ಯಾಯೋಗ, ಸಂತಾನಚಿಂತೆ, ವ್ಯಾಪಾರ-ವ್ಯವಹಾರದಲ್ಲಿ ವಂಚನೆ, ಮಾತಿನಲ್ಲಿ ಉದ್ವಿಗ್ನತೆ, ಸಿಟ್ಟು ಮತ್ತು ನೀಚತನ ಇರುತ್ತದೆ.

## ೧೫. ತೃತೀಯ ಭಾವಗತ ಧನೇಶಫಲ

**ಪರಾಶರಹೋರಾ**

**ಧನೇಶೇ ಸಹಜೇ ಜಾತೋ ವಿಕ್ರಮೀ ಮತಿಮಾನ್ ಗುಣೀ ।**
**ಕಾಮೀ ಲೋಭೀ ಶುಭಾಢ್ಯೇ ಚ ಪಾಪಾಢ್ಯೇ ದೇವನಿಂದಕಃ ॥**

ಧನೇಶನು ಶುಭಗ್ರಹನಾಗಿ ತೃತೀಯಭಾವದಲ್ಲಿ ಇದ್ದರೆ ಜಾತಕನು ಪರಾಕ್ರಮಿಯು, ಬುದ್ಧಿವಂತನು, ಗುಣವಂತನು, ಕಾಮುಕನು, ಲೋಭಿಯು ಆಗುತ್ತಾನೆ.

ಧನೇಶನು ಪಾಪಗ್ರಹನಾಗಿ ತೃತೀಯಭಾವದಲ್ಲಿ ಇದ್ದರೆ ಜಾತಕನು ದೇವರ ನಿಂದೆ ಮಾಡುವವನು ಆಗುತ್ತಾನೆ.

**ಮಾನಸಾಗರೀ**

**ಧನಪೇ ಸಹಜಗತೇ ಚೇದ್ ಬಂಧು ವಿಭೇದಾದಿ ವರ್ಜಿತಃ ಕ್ರೂರೇ ।**
**ಸೌಮ್ಯೇ ರಾಜವಿರೋಧೀ ಭೂತನಯೇ ತಸ್ಕರಃ ಪುರುಷಃ ॥**

1. ಧನೇಶನು ಕ್ರೂರಗ್ರಹನಾಗಿ ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಬಂಧು-ಬಾಂಧವರಲ್ಲಿ ಯಾವ ವಿಧದ ಬೇಧ-ಭಾವ ಇರುವುದಿಲ್ಲ. 2. ಧನೇಶನು ಶುಭಗ್ರಹನಾಗಿ ತೃತೀಯಭಾವದಲ್ಲಿ ಇದ್ದರೆ ಜಾತಕನು ರಾಜನ ವಿರೋಧಿ ಆಗುತ್ತಾನೆ. 3. ಕುಜನು ಧನಾಧಿಪತಿಯಾಗಿ (ಮೀನ ಮತ್ತು ತುಲಾ ಲಗ್ನದವರಿಗೆ

ಕುಜನು ಧನಾಧಿಪತಿ ಆಗಿರುತ್ತಾನೆ.) ತೃತೀಯಭಾವದಲ್ಲಿ ಇದ್ದರೆ ಜಾತಕನು ಕಳ್ಳನು ಆಗುತ್ತಾನೆ.

ಯವನಜಾತಕ

> ಧನಾಧಿಪೇ ಭ್ರಾತೃಗತೇ ಖಲಃ ಸ್ಯಾತ್ಸೋದ್ವೇಗಯುಗ್ಭ್ರಾತೃ ಸುಖೇನ ಹೀನಃ।
> ಸೂರ್ಯೋದ್ಭವೇ ಭ್ರಾತೃಗತೇ ವಿರೋಧೀ ಚೌರಃ ಕುಜೇ ಚಾರ್ಕಸುತೇ ವಿಬಂಧುಃ ॥

1. ಧನೇಶನು ತೃತೀಯಭಾವದಲ್ಲಿ ಇದ್ದರೆ ಜಾತಕನು ದುಷ್ಟನು, ಉದ್ವೇಗಯುಕ್ತನು ಸಹೋದರರ ಸುಖವಿಲ್ಲದವನು, 2. ಧನೇಶನಾಗಿ ಸೂರ್ಯನು (ಕರ್ಕಟಕ ಲಗ್ನ) ತೃತೀಯಭಾವದಲ್ಲಿ (ಕನ್ಯಾರಾಶಿ) ಇದ್ದರೆ ಜಾತಕನಿಗೆ ಸಹೋದರರೊಂದಿಗೆ ವೈರತ್ವ ಇರುತ್ತದೆ. 3. ಧನೇಶನಾದ ಕುಜನು (ಮೀನ ಅಥವಾ ತುಲಾ ಲಗ್ನ) ತೃತೀಯಭಾವದಲ್ಲಿ ಇದ್ದರೆ ಜಾತಕನು ಕಳ್ಳನು ಆಗುತ್ತಾನೆ. 4. ಧನೇಶನಾದ ಶನಿಯು (ಧನು ಅಥವಾ ಮಕರ ಲಗ್ನ) ತೃತೀಯಭಾವದಲ್ಲಿ ಇದ್ದರೆ ಜಾತಕನು ಬಂಧುಬಾಂಧವರನ್ನು ಕಳಕೊಂಡವನು ಆಗುತ್ತಾನೆ (ಧನುಲಗ್ನದವರಿಗೆ ದ್ವಿತೀಯಾಧಿಪತಿ ಶನಿಯು ತೃತೀಯಭಾವವಾದ ಕುಂಭರಾಶಿಯಲ್ಲಿ ಇದ್ದಾಗ ಮತ್ತು ಮಕರಲಗ್ನದವರಿಗೆ ದ್ವಿತೀಯಾಧಿಪತಿಯಾದ ಶನಿಯು ಮೀನರಾಶಿಯಲ್ಲಿ ಇದ್ದಾಗ ಈ ಯೋಗ ಆಗುತ್ತದೆ.)

## ೧೬. ಚತುರ್ಥಭಾವಗತ ಧನೇಶಫಲ

ಪರಾಶರಹೋರಾ

> ಧನೇಶೇ ಸುಖಭಾವಸ್ಥೇ ಸರ್ವಸಂಪತ ಸಮನ್ವಿತಃ ।
> ಗುರುಣಾ ಸಂಯುತೇ ಸ್ವೋಚ್ಚೇ ರಾಜತುಲ್ಯೋ ನರೋ ಭವೇತ್ ॥

ಧನೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಸಕಲಸಂಪತ್ತನ್ನು ಪಡೆಯುತ್ತಾನೆ, ಧನೇಶನು ಉಚ್ಚನಾಗಿ ಗುರುವಿನ ಯುತಿಯಲ್ಲಿ ಇದ್ದರೆ ಜಾತಕನು ರಾಜತುಲ್ಯನು ಆಗುತ್ತಾನೆ.

ಮಾನಸಾಗರೀ

> ತುರ್ಯಗತೇ ದ್ರವಿಣಪತೌ ಪಿತೃಲಾಭಪರಃ ಸತ್ಯದಯಾಯುಕ್ತಃ ।
> ದೀರ್ಘಾಯುಃ ಕ್ರೂರಖಗೇ ಪುನರಥ ವಾ ಮರಣಂ ವಿನಿರ್ದೇಶ್ಯಮ್ ॥

ಧನೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ತಂದೆಯಿಂದ ಲಾಭ, ಸತ್ಯವಂತನು, ದಯಾವಂತನು, ದೀರ್ಘಾಯುಷ್ಯ ಉಳ್ಳವನು. ಧನಾಧಿಪತಿಯು, ಪಾಪಗ್ರಹನಾದರೆ ಮರಣವನ್ನು ಸೂಚಿಸುತ್ತಾನೆ.

**ಯವನಜಾತಕ**

**ಧನಾಧಿಪೇ ತುರ್ಯಗತೇ ಧನೀ ಸ್ಯಾನ್ಮಾತುರ್ಗುರೋರ್ಲಬ್ಧಧನಃ ಸತೇಜಾಃ ।**
**ಆಯುಷ್ಮವಾನ್ ಸೌಮ್ಯಖಗೈಃ ಸದೈವ ಕ್ರೂರೈರ್ದರಿದ್ರೋ ಬಹುರೋಗ ಭಾಕ್ಸ್ಯಾತ್ ॥**

ಧನೇಶನು ಶುಭಗ್ರಹನಿಂದ ಯುತನಾಗಿ ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಧನಿಕನು, ತಾಯಿ ಮತ್ತು ಗುರುವಿನಿಂದ ಧನ ಲಭಿಸುತ್ತದೆ, ತೇಜಸ್ವಿಯು ಆಯುಷ್ಯವಂತನು ಆಗುತ್ತಾನೆ, ಕ್ರೂರಗ್ರಹನಿಂದ ಯುತನಾದರೆ ಜಾತಕನು ದರಿದ್ರನು ಮತ್ತು ಅನೇಕ ರೋಗಗಳಿಂದ ಪೀಡಿತನು ಆಗುತ್ತಾನೆ.

ಅನುಭವದಲ್ಲಿ - ಧನೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು, ಭೂಮಿ, ಗೃಹ, ವಾಹನಾದಿ ಸಕಲ ಸೌಕರ್ಯಗಳನ್ನು ಪಡೆಯುತ್ತಾನೆ, ಮಾತೃಸುಖ ಮತ್ತು ತಾಯಿಯಿಂದಲೂ ಧನ ಸಂಪತ್ತು ಲಭಿಸುತ್ತದೆ, ಧನೇಶನು ಪಾಪಗ್ರಹನಾದರೆ ಕಪಟ ಮತ್ತು ವಂಚನೆಯಿಂದ ಧನ-ಭೂಮಿ ಪಡೆಯುತ್ತಾನೆ, ಆದರೆ ಕೋರ್ಟು ವ್ಯವಹಾರದಿಂದ ಹಾನಿಗೀಡಾಗುತ್ತಾನೆ, ಕುಟುಂಬೀಯರೊಂದಿಗೆ ಕಲಹ, ಶಾರೀರಿಕ ಪೀಡೆ, ಪರಸ್ತ್ರೀರತನಾಗಿ ಧನನಾಶ, ಆರೋಗ್ಯದ ಹಾನಿ ಸಂಭವಿಸುತ್ತದೆ.

## ೧೭. ಪಂಚಮಭಾವಗತ ಧನೇಶಫಲ

**ಪರಾಶರಹೋರಾ**

**ಧನೇಶೇ ಸುತಭಾವಸ್ಥೇ ಜಾತೋ ಧನಸಮನ್ವಿತಃ ।**
**ಧನೋಪಾರ್ಜನಶೀಲಾಶ್ಚ ಜಾಯಂತೇ ತತ್ಸುತಾ ಅಪಿ ॥**

ಧನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಧನವಂತನು, ಅವನ ಪುತ್ರರು ಕೂಡಾ ಧನಸಂಪಾದನೆ ಮಾಡುವ ಆಸಕ್ತಿ ಮತ್ತು ಉದ್ದೇಶ ಉಳ್ಳವರು ಆಗುತ್ತಾರೆ.

ಮಾನಸಾಗರೀ

> ತನಯಕಮಲ ವಿಲಾಸೀ ಕಷ್ಟತರೇ ಕರ್ಮಣಿ ಪ್ರಸಿದ್ಧಂ ಚ ।
> ಕೃಪಣಾಂ ದುಃಖನಿಧಾನಂ ತನಯಗತೋ ಧನಪತಿಃ ಕುರುತೇ ॥

ಧನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಕಮಲ ಪುಷ್ಪದಂತೆ ಪ್ರಸನ್ನಚಿತ್ತನು, ಪುತ್ರರೊಂದಿಗೆ ಸುಖವಂತನು, ಕಷ್ಟಕರವಾದ ಕಾರ್ಯಸಾಧನೆಯಿಂದ ಪ್ರಸಿದ್ಧನು, ಕೃಪಣನು ಮತ್ತು ದುಃಖದಿಂದ ಪೀಡಿತನು ಆಗುತ್ತಾನೆ.

ಯವನಜಾತಕ

> ದನಾಧಿಪೇ ಪಂಚಮಗೇ ಸುತಾನಾಂ ಸೌಖ್ಯಂ ಭವೇಲ್ಲಾಭಸಮನ್ವಿತಂ ಚ ।
> ಸೌಮ್ಯೇರುದಾರಃ ಕೃಪಣಃ ಖಲೈಶ್ಚ ದುಃಖಾನ್ವಿತಂ ದುಷ್ಟಸುತಂ ವಿದದ್ಯಾತ್ ॥

ಧನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಮಕ್ಕಳಿಂದ ಸುಖಿ ಮತ್ತು ಲಾಭ ಉಳ್ಳವನು, ಪಂಚಮಭಾವದಲ್ಲಿ ಶುಭಗ್ರಹನಿದ್ದರೆ ಜಾತಕನು ಉದಾರನು, ಕ್ರೂರಗ್ರಹನಿದ್ದರೆ ದುಃಖಿತನು ಆಗುತ್ತಾನೆ, ಹಾಗೂ ಅವನ ಮಕ್ಕಳು ದುಃಖಿತರಾಗಿ ದುಷ್ಟಸ್ವಭಾವದವರು ಆಗುತ್ತಾರೆ.

ಅನುಭವದಲ್ಲಿ - ಧನೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಮೇಧಾವಿಯು, ಸ್ವಾರ್ಜಿತವಿತ್ತ, ಸಂಶೋಧನಾ ಪ್ರವೃತ್ತಿ ಉಳ್ಳವನು, ಉತ್ತಮ ಸಂತಾನ ಮತ್ತು ಸಂತಾನ ಆದನಂತರ ಅಭಿವೃದ್ಧಿ ಹೊಂದುತ್ತಾನೆ, ಲಗ್ನೇಶನು ಪಾಪಗ್ರಹನಾಗಿ ಪಂಚಮಭಾವದಲ್ಲಿ ಇದ್ದರೆ ಜಾತಕನು ಶೀಘ್ರಕೋಪಿಯು, ಉದರವೇದನ, ಯಾವಾಗಲೂ ಮಕ್ಕಳ ಆರೋಗ್ಯ ಮತ್ತು ಅಭಿವೃದ್ಧಿಯ ಚಿಂತೆ ಇರುತ್ತದೆ. ಸಾಮಾನ್ಯವಾಗಿ ಮಕ್ಕಳು ಬುದ್ಧಿವಂತರು, ಗುಣವಂತರು ಮತ್ತು ವಿದ್ಯಾವಂತರು ಆಗುತ್ತಾರೆ.

## ೧೮. ಷಷ್ಠಭಾವಗತ ಧನೇಶಫಲ

ಪರಾಶರಹೋರಾ

> ಧನೇಶೇ ರಿಪುಭಾವಸ್ಥೇ ಸಶುಭೇ ಶತ್ರುತೋ ಧನಮ್ ।
> ಸಪಾಪೇ ಶತ್ರುತೋಹಾನಿರ್ಜಂಘಾವೈಕಲ್ಯವಾನ್ ಭವೇತ್ ॥

ಧನೇಶನು ಶುಭಗ್ರಹನ ಯುತಿಯಲ್ಲಿ ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಶತ್ರುವಿನಿಂದ ಧನಲಾಭ ಆಗುತ್ತದೆ.

ಧನೇಶನು ಪಾಪಗ್ರಹನ ಯುತಿಯಲ್ಲಿ ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಶತ್ರುವಿನಿಂದ ಹಾನಿ ಮತ್ತು ಮೊಣಕಾಲಿನಲ್ಲಿ ವಿಕಲತೆ ಇರುತ್ತದೆ.

**ಮಾನಸಾಗರೀ**

> **ಷಷ್ಠಗತೋ ದ್ರವಿಣಪತಿರ್ಧನಸಂಗ್ರಹತತ್ಪರಂ ರಿಪುಘ್ನಂ ಚ ।**
> **ಭೂಲಾಭಿನಂ ಸುಖಚರೈಃ ಪಾಪೈರ್ಧನವರ್ಜಿತಂ ಪುರುಷಮ್ ॥**

ಧನೇಶನು ಶುಭಗ್ರಹನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ಧನಸಂಗ್ರಹತತ್ಪರನು, ಶತ್ರುದಮನ ಮಾಡುವವನು ಮತ್ತು ಭೂಮಿಲಾಭ ಆಗುತ್ತದೆ.

ಧನೇಶನು ಪಾಪಗ್ರಹನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ಧನರಹಿತನು ಆಗುತ್ತಾನೆ.

**ಯವನಜಾತಕ**

> **ಧನಾಧಿಪೇ ಷಷ್ಠಗೃಹೇ ರಿಪುಘ್ನಂ ಸದಾ ನರಂ ಸಂಚಯಕಾರಕಂ ಚ ।**
> **ಬಲಾಭಿಭೂತೈಃ ಖಚರೈಃ ಶುಭೇಶ್ಚ ಪಾಪೈರ್ದರಿದ್ರಃ ಸರಿಪುಃ ಖಲಃ ಸ್ಯಾತ್ ॥**

ಧನೇಶನು ಷಷ್ಠಬಾವದಲ್ಲಿ 1. ಬಲಿಷ್ಠ ಶುಭಗ್ರಹರಿಂದ ಕೂಡಿದ್ದರೆ ಜಾತಕನು ಶತ್ರುನಾಶ ಮಾಡುತ್ತಾನೆ, ಮತ್ತು ಧನಸಂಚಯ ಆಗುತ್ತದೆ. 2. ಪಾಪಗ್ರಹರಿಂದ ಕೂಡಿದ್ದರೆ ಜಾತಕನು ದರಿದ್ರನು, ಶತ್ರುಗಳು ಉಳ್ಳವನು ಮತ್ತು ದುಷ್ಟನು ಆಗುತ್ತಾನೆ.

## ೧೯. ಸಪ್ತಮಭಾವಗತ ಧನೇಶಫಲ

**ಪರಾಶರಹೋರಾ**

> **ಧನೇಶೇ ಸಪ್ತಮೇ ಜಾತಃ ಪರದಾರರತೋ ಭಿಷಕ್ ।**
> **ಪಾಪೇಕ್ಷಿತಯುತೇ ತಸ್ಯ ಭಾರ್ಯಾ ಚ ವ್ಯಭಿಚಾರಿಣೀ ॥**

ಧನೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಪರಸ್ತ್ರೀಯಲ್ಲಿ ಆಸಕ್ತನು ಮತ್ತು ವೈದ್ಯನು ಆಗುತ್ತಾನೆ.

ಧನೇಶನು ಸಪ್ತಮಭಾವದಲ್ಲಿ ಪಾಪಗ್ರಹರಿಂದ ಯುತ ಅಥವಾ ದೃಷ್ಟನಾದರೆ ಜಾತಕನ ಪತ್ನಿಯು ವ್ಯಭಿಚಾರ ಪ್ರವೃತ್ತಿ ಉಳ್ಳವಳು ಆಗುತ್ತಾಳೆ.

**ಮಾನಸಾಗರೀ**

> **ಧನಪೇऽಪಿ ಚ ಸಪ್ತಮಗೇ ಶ್ರೇಷ್ಠಗಚಿಂತಾ ವಿಲಾಸ ಭೋಗಪತೀ ।**
> **ಧನಸಂಗ್ರಹಣೇ ಭಾರ್ಯಾಕ್ರೂರೇ ಖೇಚರೇ ಭವೇತ್ ವಂಧ್ಯಾ ॥**

ಧನೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಚಿಂತೆ ಇರುತ್ತದೆ, ಅವನ ಪತ್ನಿಯು ವಿಲಾಸ ಮತ್ತು ಸುಖವಂತಳು ಹಾಗೂ ಧನಸಂಗ್ರಹ ಮಾಡುವವಳು ಆಗುತ್ತಾಳೆ.

ಧನೇಶನು ಪಾಪಗ್ರಹನಾಗಿ ಸಪ್ತಮಭಾವದಲ್ಲಿ ಇದ್ದರೆ ಜಾತಕನ ಪತ್ನಿಯು ಬಂಜೆ ಆಗುತ್ತಾಳೆ.

**ಯವನಜಾತಕ**

> **ಧನಾಧಿಪೇ ಸಪ್ತಮಗೇ ಸುರೂಪಂ ಚಿಂತಾನ್ವಿತಂ ಸಂಗ್ರಹಣೇ ಧನೀ ಸ್ಯಾತ್ ।**
> **ಭಾರ್ಯಾ ವಿಲಾಸೇನ ಯುತಃ ಸುತಾಢ್ಯಃ ಕ್ರೂರಾನ್ವಿತೇ ಹೀನಸುತೋ ನರಃ ಸ್ಯಾತ್ ॥**

ಧನೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ರೂಪವಂತನು, ಚಿಂತಾಗ್ರಸ್ಥನು, ಗ್ರಹಣೀರೋಗಪೀಡೆ ಮತ್ತು ಧನವಂತನು ಆಗುತ್ತಾನೆ. ಪತ್ನಿಯೊಂದಿಗೆ ವಿಲಾಸ, ಪುತ್ರವಂತನು ಆಗುತ್ತಾನೆ. ಸಪ್ತಮಸ್ಥಿತ ಧನೇಶನು ಕ್ರೂರಗ್ರಹನಾದರೆ ಪುತ್ರಹೀನನು ಆಗುತ್ತಾನೆ.

ಅನುಭವದಲ್ಲಿ - ದ್ವಿತೀಯ ಮತ್ತು ಸಪ್ತಮಭಾವವು ಮಾರಕಸ್ಥಾನ ಆಗಿರುತ್ತದೆ, ಧನೇಶನು ಮಾರಕಾಧಿಪತಿಯಾಗಿ ಮಾರಕಸ್ಥಾನವಾದ ಸಪ್ತಮಭಾವದಲ್ಲಿ ಇದ್ದಾಗ ಬಲಿಷ್ಠಮಾರಕನು ಆಗುತ್ತಾನೆ, ಧನೇಶನು ಪಾಪಗ್ರಹನಾಗಿ ಸಪ್ತಮಭಾವದಲ್ಲಿ ಇದ್ದಾಗ ಸಂತಾನಚಿಂತೆ ಮತ್ತು ದಾಂಪತ್ಯವಿರಸ ಸಂಭವಿಸುತ್ತದೆ.

# ೨೦. ಅಷ್ಟಮಭಾವಗತ ಧನೇಶಫಲ

**ಪರಾಶರಹೋರಾ**

ಧನೇಶೇಽಷ್ಟಮಗೇ ಜಾತೋ ಭೂರಿಭೂಮಿಧನೈರ್ಯುತಃ ।
ಪತ್ನೀಸುಖಂ ಭವೇತ್ ಸ್ವಲ್ಪಂ ಜ್ಯೇಷ್ಠಭ್ರಾತೃಸುಖಂ ನ ಹಿ ॥

ಧನೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಧನವಂತನು, ಶಾಶ್ವತ ಆದಾಯ ಉಳ್ಳವನು, ಭೂಮಿ ಮತ್ತು ಧನಸಮೃದ್ಧಿ ಆಗುತ್ತದೆ, ಅಲ್ಪದಾಂಪತ್ಯ ಸುಖಿ, ಹಿರಿಯ ಸಹೋದರನ ಸುಖ ಲಭಿಸುವುದಿಲ್ಲ.

**ಮಾನಸಾಗರೀ**

ಧನಪೇಽಷ್ಟಮಭವನಸ್ಥೇಽಷ್ಟಕಪಾಲೀ ಚಾತ್ಮಘಾತಕಃ ಪುರುಷಃ ।
ಉತ್ಪನ್ನಭುಗ್ವಿಲಾಸೀ ಪರಧನಹಿಂಸೀ ಭವತಿದೈವಪರಃ ॥

ಧನೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಷ್ಟಕಪಾಲಿ, ಆತ್ಮಘಾತಕನು ಸ್ವಾರ್ಜಿತವನ್ನು ಭೋಗಿಸುತ್ತಾನೆ, ವಿಲಾಸಿಯು, ಪರಧನಹಾನಿ ಮಾಡುತ್ತಾನೆ ಮತ್ತು ಭಾಗ್ಯವಾದಿಯು ಆಗುತ್ತಾನೆ.

**ಯವನಜಾತಕ**

ಧನಾಧಿಪೋ ಮತ್ಯುಗತಃ ಕರೋತಿ ಮನಾಕ್ಕಲಿಂ ಘಾತಕರಂ ಸ್ವದೇಹೇ ।
ಉತ್ಪನ್ನಭುಗ್ಭೋಗಯುತಂ ಸುರೂಪಂ ಧನಾಧಿಪಂ ಭಾವಯುತಂ ಪುಮಾಂಸಮ್ ।

ಧನೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಲ್ಪಕಲಹ ಮಾಡುವವನು ಮತ್ತು ಆತ್ಮಘಾತಕನು ಹಾಗೂ ಸ್ವತಹ ಉತ್ಪನ್ನಮಾಡಿ ತಿನ್ನುವವನು, ಭೋಗವಂತನು, ರೂಪವಂತನು ಮತ್ತು ಧನಿಕನು ಆಗುತ್ತಾನೆ.

ಅನುಭವದಲ್ಲಿ - ಧನೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ರೂಪವಂತನು, ಧನವಂತನು, ಸುಖ-ಭೋಗವಂತನು ಆಗುತ್ತಾನೆ, ಭೂಮಿ ಮತ್ತು ಮನೆಕಟ್ಟಿಸಿ ಮಾರಾಟ ಮಾಡುವುದು ಮತ್ತು ಸಾರಿಗೆ ಸಂಪರ್ಕದಿಂದ ಅಭಿವೃದ್ಧಿ ಹೊಂದುತ್ತಾನೆ, ಇವರಿಗೆ ಆಕಸ್ಮಿಕ ಧನಪ್ರಾಪ್ತಿಯೋಗ ಇರುತ್ತದೆ, ಆಗ್ಗಾಗ್ಗೆ ಧನ-ಸಂಪತ್ತಿನ ಏರಿಳಿತ ಸಂಭವಿಸುತ್ತದೆ.

## ೨೧. ನವಮ ಭಾಗವತ ಧನೇಶಫಲ

ಪರಾಶರ ಹೋರಾ:-

ಧನೇಶೇ ಧರ್ಮಭಾವಸ್ಥೇ ಧನವಾನುದ್ಯಮೀ ಪಟು: ।
ಬಾಲ್ಯೇ ರೋಗೀ ಸುಖೀ ಪಶ್ಚಾತ್ ತೀರ್ಥಧರ್ಮವ್ರತಾದಿ ಕೃತ್ ॥

ಧನೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಧನವಂತನು, ಉದ್ಯಮಿಯು, ನಿಪುಣನು, ಸಮರ್ಥನು ಆಗುತ್ತಾನೆ. ಬಾಲ್ಯಕಾಲದಲ್ಲಿ ರೋಗಿಯು, ಅನಂತರ ಸುಖವಂತನು, ತೀರ್ಥಯಾತ್ರೆ ಮತ್ತು ಧಾರ್ಮಿಕ ವ್ರತಾದಿ ಮಾಡುತ್ತಾನೆ.

ಮಾನಸಾಗರೀ :-

ಧನಪೇ ಧರ್ಮಗೃಹಸ್ಥೇ ಸೌಮ್ಯೇ ದಾನಪ್ರಸಿದ್ಧವಾಗ್ಪವತಿ ।
ಕ್ರೂರೇ ದರಿದ್ರಭಿಕ್ಷುರ್ವಿಡಂಬವೃತ್ತಿಸ್ತಥಾ ಮನುಜಃ॥

ಧನೇಶನು ಶುಭಗ್ರಹನಾಗಿ ನವಮಭಾವದಲ್ಲಿ ಇದ್ದಾಗ ಜಾತಕನು ದಾನ-ಧರ್ಮಾದಿಯಿಂದ ಪ್ರಸಿದ್ಧನು, ಕೊಟ್ಟಮಾತಿನಂತೆ ನಡೆಯುವವನು ಆಗುತ್ತಾನೆ. ಧನೇಶನು ಕ್ರೂರಗ್ರಹನಾಗಿ ನವಮಭಾವದಲ್ಲಿ ಇದ್ದಾಗ ಜಾತಕನು ದರಿದ್ರನು, ಭಿಕ್ಷುಕನು, ಲಜ್ಜಿತನು ಮತ್ತು ಅಪಮಾನಿತನು ಆಗುತ್ತಾನೆ.

ಯವನ ಜಾತಕ:-

ಧರ್ಮಾಶ್ರಿತೇ ದ್ರವ್ಯಪತೌ ಸ ದಾತಾ ಪ್ರಸಿದ್ಧಭಾಗ್ಯ: ಸಬಲೋ ವ್ರತೀ ಸ್ಯಾತ್ ।
ಪುಣ್ಯೇ ರತಿ: ಸೌಮ್ಯಯುತ: ಖಲೇನ ಹೀನೋ ದರಿದ್ರ: ಕೃಪಣ: ಖಲ: ಸ್ಯಾತ್ ॥

ಧನೇಶನು ಶುಭಗ್ರಹನೊಂದಿಗೆ ನವಮಭಾವದಲ್ಲಿ ಇದ್ದಾಗ ಜಾತಕನು ದಾನಿಯು, ಭಾಗ್ಯವಂತನಾಗಿ ಪ್ರಸಿದ್ಧನು ಆಗುತ್ತಾನೆ, ಬಲಿಷ್ಠನು ವ್ರತ ಮಾಡುವವನು, ಪುಣ್ಯರತನು ಆಗುತ್ತಾನೆ.

ಧನೇಶನು ಪಾಪಗ್ರಹನಿಂದ ಕೂಡಿದ್ದರೆ ಜಾತಕನು ಹೀನನು, ದರಿದ್ರನು ಮತ್ತು ಕೃಪಣನು ಆಗುತ್ತಾನೆ.

# ೨೨. ದಶಮ ಭಾವಗತ ಧನೇಶಫಲ

**ಪರಾಶರ ಹೋರಾ:-**

**ಧನೇಶೇ ಕರ್ಮಗೇ ಜಾತ: ಕಾಮಿೂ ಮಾನೀ ಚ ಪಂಡಿತ: ।**
**ಬಹುದಾರ ಧನೈರ್ಯುಕ್ತ: ಕಿಂಚ ಪುತ್ರ ಸುಖೋಜ್ಝಿತ: ॥**

ಧನೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಕಾಮುಕನು ಮಾನವಂತನು ಮತ್ತು ಪಂಡಿತನು ಕೂಡಾ ಆಗಿರುತ್ತಾನೆ, ಅನೇಕ ಪತ್ನಿಯರು ಮತ್ತು ಹೇರಳ ಧನ ಉಳ್ಳವನು ಮತ್ತು ಪುತ್ರಸುಖ ವಂಚಿತನು ಆಗುತ್ತಾನೆ.

**ಮಾನಸಾಗರೀ:-**

**ದಶಮಗೃಹಸ್ಥೇ ಧನಪೇ ನರೇಂದ್ರಮಾನ್ಯೋ ಭವೇನ್ನೃಪಾಲ್ಲಕ್ಷ್ಮೀ: ।**
**ಸೌಮ್ಯಗೃಹಗೇ ಚ ಮಾತುರ್ಮನೋಜ: ಪಿತೃಪಾಲಕೋ ಭವತಿ ॥**

ಧನೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಸನ್ಮಾನಿತನು ಹಾಗೂ ರಾಜನಿಂದ ಧನವನ್ನು ಪಡೆಯುತ್ತಾನೆ. ದಶಮಾಧಿಪತಿಯು ಶುಭಗ್ರಹರ ರಾಶಿಯಲ್ಲಿ ಇದ್ದಾಗ ಜಾತಕನು ತಂದೆ-ತಾಯಿಯ ಲಾಲನೆ-ಪಾಲನೆ ಮಾಡುತ್ತಾನೆ.

**ಯವನ ಜಾತಕ:-**

**ದ್ರವ್ಯಾಧಿನಾಥೋ ದಶಮೇಯದಿ ಸ್ಯಾನ್ನರೇಂದ್ರಮಾನ್ಯಃ ಸುಭಗೋ ಯಶಸ್ವೀ ।**
**ಮಾತುಃ ಪಿತುರ್ಭಕ್ತಿಯುತಃ ಸುಭೋಗೀ ಖಲೇಽನ್ಯಥಾ ಸ್ಯಾತ್ಪಿತೃಮಾತೃ ವೈರೀ ॥**

ಧನೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಸನ್ಮಾನಿತನು, ಅದೃಷ್ಟವಂತನು, ಯಶಸ್ವಿಯು ಆಗುತ್ತಾನೆ, ತಾಯಿ-ತಂದೆಯ ಭಕ್ತಿ ಉಳ್ಳವನು, ಉತ್ತಮ ಭೋಗಿಯು ಆಗುತ್ತಾನೆ.

ಧನೇಶನು ಪಾಪಗ್ರಹನಾಗಿ ದಶಮಭಾವದಲ್ಲಿ ಇದ್ದಾಗ ಜಾತಕನು ತಂದೆ-ತಾಯಿಯ ವೈರಿ ಆಗುತ್ತಾನೆ.

ಅನುಭವದಲ್ಲಿ - ಧನೇಶನು ಶುಭಗ್ರಹನಾಗಿ ದಶಮಭಾವದಲ್ಲಿ ಇದ್ದಾಗ

ಜಾತಕನು ಬುದ್ಧಿವಂತನು, ಚತುರತೆಯಿಂದ ವ್ಯಾಪಾರ-ವ್ಯವಹಾರ ನಿರ್ವಹಿಸಿ ಧನ-ಸಂಪತ್ತನ್ನು ಗಳಿಸುತ್ತಾನೆ, ಹೆತ್ತವರನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ, ಕೈಕೊಂಡ ಕಾರ್ಯಗಳಲ್ಲಿ ಯಶಸ್ಸನ್ನು ಗಳಿಸುತ್ತಾನೆ, ಧನೇಶನು ಪಾಪಗ್ರಹನಾದರೆ ಜಾತಕನು ತನ್ನ ವಾದವನ್ನು ಸಾಧಿಸುವವನು, ಹೆತ್ತವರೊಂದಿಗೆ ವಿವಾದ, ವ್ಯಾಪಾರದಲ್ಲಿ ಏರಿಳಿತ, ವಂಚನೆ-ಕುಹಕತನದಿಂದ ಧನ ಗಳಿಸುತ್ತಾನೆ, ಪುತ್ರ ಸುಖ ಸಮಾಧಾನಕರವಲ್ಲ.

## ೨೩. ಏಕಾದಶ ಭಾವಗತ ಧನೇಶಫಲ

ಪರಾಶರಹೋರಾ

ಧನೇಶೇ ಲಾಭಭಾವಸ್ಥೇ ಸರ್ವಲಾಭ ಸಮನ್ವಿತಃ ।
ಸದೋದ್ಯೋಗಯುತೋ ಮಾನೀ ಕೀರ್ತಿಮಾನ್ ಜಾಯತೇ ನರಃ ॥

ಧನೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಎಲ್ಲ ವಿಧದಿಂದ ಲಾಭ ಪಡೆಯುತ್ತಾನೆ, ಸದಾ ಉದ್ಯೋಗ ನಿರತನು, ಮಾನವಂತನು ಮತ್ತು ಕೀರ್ತಿವಂತನು ಆಗುತ್ತಾನೆ.

ಮಾನಸಾಗರೀ

ಏಕಾದಶಗಃ ಖೇಚರವ್ಯವಹಾರೇ ಶ್ರೀಪತಿಃ ಖ್ಯಾತಃ ।
ಲೋಕೌಘಪ್ರತಿಪಾಲನರತಂ ಚ ನರಂ ಭವೇಜ್ಜಾತಮ್ ॥

ಧನೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಗ್ರಹರ ವ್ಯವಹಾರ (ಆಕಾಶದಲ್ಲಿ ಸಂಚರಿಸುವ ಕಾಯ, ಚಲಿಸುವ ವಾಹನಾದಿ ಮತ್ತು ಅದಕ್ಕೆ ಸಂಬಂಧಪಟ್ಟ ದ್ರವ್ಯ, ವಸ್ತು ಇತ್ಯಾದಿ) ಕುಶಲತೆಯಿಂದ ನಿರ್ವಹಿಸಿ ಧನವಂತನು, ಪ್ರಖ್ಯಾತನು ಮತ್ತು ಲೋಕಕ್ಕೆ ಹಿತಕಾರಕನು ಆಗುತ್ತಾನೆ.

ಯವನಜಾತಕ

ಲಾಭಾಶ್ರಿತೋ ದ್ರವ್ಯಪತಿಃ ಶ್ರಿಯಃ ಪತಿರ್ಮಂತ್ರೀ ನೃಪಸ್ಯ ವ್ಯವಹಾರ ದಕ್ಷಃ ।
ವ್ಯಾಪಾರಯುಕ್ತಃ ಪುರುಷೋ ಯಶಸ್ವೀ ಲಾಭಾನ್ವಿತೋ ಭೋಗ್ಯಪರಃ ಸುಖೀ ಚ ॥

ಧನೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನ-ಸಂಪತ್ತಿನ ಒಡೆಯನು, ರಾಜನಮಂತ್ರೀ, ವ್ಯವಹಾರ ಕುಶಲನು, ವ್ಯಾಪಾರ ನಿರತನು, ಯಶಸ್ವಿಯು, ಲಾಭ ಪಡೆಯುತ್ತಾನೆ, ಭೋಗ ಮತ್ತು ಸುಖದಿಂದ ಕೂಡಿರುವವನು ಆಗುತ್ತಾನೆ.

ಅನುಭವದಲ್ಲಿ - ಧನೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಕೈಕೊಂಡ ಉದ್ಯಮ, ವ್ಯಾಪಾರವನ್ನು ಯಶಸ್ವಿಯಾಗಿ ನಿರ್ವಹಿಸಿ ನಿರಂತರ ದುಡಿದು ಲಾಭ ಗಳಿಸುತ್ತಾನೆ, ಕೀರ್ತಿವಂತನು, ಧನವಂತನು ಆಗುತ್ತಾನೆ, ಹಿರಿಯ ಸಹೋದರ ನೊಂದಿಗೆ ಕಲಹ ಅಥವಾ ಹಿರಿಯ ಸಹೋದರನನ್ನು ಕಳಕೊಳ್ಳುತ್ತಾನೆ, ಪಿತ್ರಾರ್ಜಿತ ಸಂಪತ್ತಿನ ವಿಚಾರ ದಾಯಾದಿ ಕಲಹ ಇರುತ್ತದೆ.

## ೨೪. ವ್ಯಯಭಾವಗತ ಧನೇಶಫಲ

**ಪರಾಶರಹೋರಾ**

**ಧನೇಶೇ ವ್ಯಯಭಾವಸ್ಥೇ ಸಾಹಸೀ ಧನವರ್ಜಿತಃ ।**
**ಪರಭಾಗ್ಯರತಸ್ತಸ್ಯ ಜ್ಯೇಷ್ಠಾಪತ್ಯಸುಖಂ ನಹಿ ॥**

ಧನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಸಾಹಸಿಯು, ಧನ ಇಲ್ಲದವನು ಪರಧನ-ಸಂಪತ್ತಿನಲ್ಲಿ ರತನು ಮತ್ತು ಪ್ರಥಮ ಶಿಶುವಿನಿಂದ ಸುಖ ಇರುವುದಿಲ್ಲ.

**ಮಾನಸಾಗರೀ**

**ದ್ರವಿಣಪತೌ ವ್ಯಯಲೀನೇ ಕೃಪಣಂ ಧನವರ್ಜಿತಂ ಕ್ರೂರೇ ।**
**ಸೌಮ್ಯೇ ಲಾಭಾಲಾಭಖ್ಯಾತಂ ಪುರುಷಂ ವದೇಜ್ಜಾತಮ್ ॥**

ಧನೇಶನು ಕ್ರೂರಗ್ರಹನಾದರೆ ಜಾತಕನು ಕೃಪಣನು ಹಾಗೂ ನಿರ್ಧನನು ಆಗುತ್ತಾನೆ.

ಧನೇಶನು ಶುಭಗ್ರಹನಾಗಿ ವ್ಯಯಭಾವದಲ್ಲಿ ಇದ್ದರೆ ಜಾತಕನಿಗೆ ಲಾಭ-ನಷ್ಟ ಸಂಭವಿಸುತ್ತದೆ. ಜಾತಕನು ಪ್ರಸಿದ್ಧನು ಆಗುತ್ತಾನೆ.

**ಯವನಜಾತಕ**

**ವಿದೇಶಗೋ ದುಷ್ಟಮನಾ ವ್ಯಯಾಶ್ರಿತೋ ದ್ರವ್ಯಾಧಿಪಃ ಪಾಪರತೋ ಜಡಾತ್ಮಾ ।**
**ಕಾಪಾಲಿಕೋ ಮ್ಲೇಚ್ಛಜನಾಭಿಸಕ್ತಃ ಕ್ರೂರೋಽತಿಚೌರೋಽಬಲವಾನ್ನರಃ ಸ್ಯಾತ್ ॥**

ಧನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ವಿದೇಶಕ್ಕೆ ಹೋಗುತ್ತಾನೆ, ದುಷ್ಟಮನ, ಧನಾಧಿಪತಿ, ಪಾಪಕರ್ಮ ನಿರತನು, ವಿವೇಕವಿಲ್ಲದವನು, ಕಾಪಾಲಿಕ, ಮ್ಲೇಚ್ಛಜನರ ಸಹವಾಸ, ಕ್ರೂರನು, ಚೋರನು ಮತ್ತು ಬಲಿಷ್ಠನು ಆಗಿರುತ್ತಾನೆ.

ಅನುಭವದಲ್ಲಿ - ಧನೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನ ಆರ್ಥಿಕ ಸ್ಥಿತಿಯಲ್ಲಿ ಏರಿಳಿತ ಇರುತ್ತದೆ, ಧನಪ್ರಾಪ್ತಿಯಾದ ಕೂಡಲೇ ಅಧಿಕ ಖರ್ಚು ಹಾಗೂ ಕೆಲವೊಮ್ಮೆ ಅನಾವಶ್ಯಕ ಖರ್ಚಿನಿಂದ ಆರ್ಥಿಕ ಸಂಕಷ್ಟ ಗಳಿಗೀಡಾಗುತ್ತಾರೆ, ಸದ್ವಿನಿಯೋಗ ಸತ್ಕರ್ಮ ಮಾಡುತ್ತಾರೆ, ಧನೇಶನು ಪಾಪಗ್ರಹನಾಗಿ ವ್ಯಯಭಾವದಲ್ಲಿ ಇದ್ದರೆ ನೀಚಜನರ ಸಹವಾಸದಿಂದ ಧನನಾಶ ಮತ್ತು ವ್ಯಾಪಾರ ವ್ಯವಹಾರದಲ್ಲಿ ನಷ್ಟ ಸಂಭವಿಸುತ್ತದೆ. ಧನೇಶನು ಶುಭಗ್ರಹನಾಗಿದ್ದರೆ ಜಾತಕನು ತನ್ನ ಧನವನ್ನು ಷೇರುಗಳಲ್ಲಿ ವಿನಿಯೋಗಿಸಿದರೆ ಅಥವಾ ಹಣವನ್ನು ಆರ್ಥಿಕ ಸಂಸ್ಥೆಯಲ್ಲಿ ಬಡ್ಡಿಗೆ ಇಡುವುದು, ಇದರಿಂದ ಹಣ ವ್ಯಯವಾದರೂ ಅದರಿಂದ ಲಾಭ ಪ್ರಾಪ್ತಿ ಆಗುತ್ತದೆ.

## ಲಗ್ನಾದಿ ಭಾವಗತ ತೃತೀಯೇಶಫಲ

### ೨೫. ಲಗ್ನಭಾವಗತ ತೃತೀಯೇಶಫಲ

**ಪರಾಶರಹೋರಾ**

> ಲಗ್ನಗೇ ಸಹಜಾಧೀಶೇ ಸ್ವಭುಜಾರ್ಜಿತ ವಿತ್ತವಾನ್ ।
> ಸೇವಾಜ್ಞಃ ಸಾಹಸೀ ಜಾತೋ ವಿದ್ಯಾಹೀನೋಽಪಿ ಬುದ್ಧಿಮಾನ್ ॥

ತೃತೀಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ತನ್ನ ಭುಜಬಲದಿಂದ ಸಂಪಾದಿಸಿ ಧನವಂತನು ಆಗುತ್ತಾನೆ. ಸೇವೆ-ಆರಾಧನೆಯಲ್ಲಿ ನಿರತನು, ಸಾಹಸವಂತನು, ವಿದ್ಯಾಹೀನನಾದರೂ ಬುದ್ಧಿವಂತನು ಆಗುತ್ತಾನೆ.

**ಮಾನಸಾಗರೀ**

> ಸಹಜಪತಿರ್ಲಗ್ನಗತೋ ವಾಗ್ಮಾದೀ ಲಂಪಟಃ ಸ್ವಜನಭೇದೀ ।
> ಸೇವಾಪರಃ ಕುಮಿತ್ರಃ ಕಂಟಕರಃ ಪ್ರೋಚ್ಯತೇ ಪುರುಷಃ ॥

ತೃತಿಯೇಶನು ಲಗ್ನಭಾವದಲ್ಲಿ ಇದ್ದರೆ ಜಾತಕನು ವಾದ-ವಿವಾದ ಮಾಡುವವನು, ಲಂಪಟನು, ಸ್ವಜನರಲ್ಲಿ ಭೇಧೋಪಾಯ ಉಂಟು ಮಾಡುವವನು, ಸೇವಾಕಾರ್ಯತತ್ಪರನು, ದುಷ್ಟಜನರ ಮಿತ್ರತ್ವ ಉಳ್ಳವನು, ಛಲ-ಕಪಟದ ಮನುಷ್ಯನು ಆಗುತ್ತಾನೆ.

**ಯವನಜಾತಕ**

**ಸಹಜಪತೌ ಲಗ್ನಗತೇ ಸ್ತ್ರೀಸ್ವಾದಲಂಪಟಃ ಸ್ವಜನಭೇದ್ಯೈಃ ।**
**ಸೇವಾಂ ಕರೋತಿ ಮಿತ್ರೈರ್ಭಪೇತ್ಕಟುಕರಃ ಪಂಡಿತಃ ಪುರುಷಃ ॥**

ತೃತೀಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಸ್ತ್ರೀಲಂಪಟನು, ಸ್ವಜನರೊಂದಿಗೆ ಬೇಧ-ಭಾವ ಉಳ್ಳವನು, ಸೇವೆ ಮಾಡುವವನು, ಮಿತ್ರರೊಂದಿಗೆ ಕಟುಭಾಷೆ ಮಾತಾಡುವವನು ಮತ್ತು ಪಂಡಿತನು ಆಗುತ್ತಾನೆ.

ಅನುಭವದಲ್ಲಿ - ತೃತೀಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು, ಪರಾಕ್ರಮ ಮತ್ತು ಪ್ರಯತ್ನದಿಂದ ದುಡಿದು ಧನಸಂಪತ್ತನ್ನು ಗಳಿಸುತ್ತಾನೆ, ಸಾಹಸವಂತನು, ಚತುರನು ಮತ್ತು ಬುದ್ಧಿವಂತನೂ ಆಗುತ್ತಾನೆ, ವಾದ-ವಿವಾದ ಪ್ರವೃತ್ತಿ ಉಳ್ಳವನು, ಕುಟುಂಬೀಯರಲ್ಲಿ ಕಲಹಕಾರಕನು. ತನ್ನ ವಾದವನ್ನು ಸಮರ್ಥಿಸುವ ಹಠತನ ಉಳ್ಳವನು ಆಗುತ್ತಾನೆ, ತೃತೀಯೇಶನು ಶುಭಗ್ರಹನಾದರೆ ಜಾತಕನು ಸತತ ಪ್ರಯತ್ನ ಮತ್ತು ಪರಿಶ್ರಮದಿಂದ ದುಡಿದು ಚತುರತೆ ಮತ್ತು ಅಲ್ಪ ಕುಹಕತನದಿಂದ ವ್ಯಾಪಾರ-ವ್ಯವಹಾರ ನಿರ್ವಹಿಸಿ ಅಭಿವೃದ್ಧಿ ಹೊಂದಿ ಧನಸಂಪತ್ತನ್ನು ಗಳಿಸುತ್ತಾನೆ.

## ೨೬. ದ್ವಿತೀಯ ಭಾವಗತ ತೃತೀಯೇಶಫಲ

**ಪರಾಶರಹೋರಾ**

**ದ್ವಿತೀಯೇ ಸಹಜಾಧಿಶೇ ಸ್ಥೂಲೋ ವಿಕ್ರಮವರ್ಜಿತಃ ।**
**ಸ್ವಲ್ಪಾರಂಭೀ ಸುಖೀ ನ ಸ್ಯಾತ್ ಪರಸ್ತ್ರೀಧನ ಕಾಮುಕಃ ॥**

ತೃತೀಯೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಸ್ಥೂಲಕಾಯನು, ಬೊಜ್ಜು ಉಳ್ಳವನು, ಸಾಹಸವಿಲ್ಲದವನು, ಕಾರ್ಯಾರಂಭ ಅಲ್ಪಮಾಡುತ್ತಾನೆ,

ಸುಖವಂತನಲ್ಲ, ಪರಧನ ಮತ್ತು ಪರಸ್ತ್ರೀಯಲ್ಲಿ ಕಣ್ಣಿಡುತ್ತಾನೆ ಮತ್ತು ಕಾಮುಕನು ಆಗುತ್ತಾನೆ.

ಮಾನಸಾಗರೀ

> ಧನಗೃಹಗೇ ಸಹಜೇಶೇ ಭಿಕ್ಷುರ್ವಿಧನೋऽಲ್ಪ ಜೀವನೋ ಮನುಜಃ ।
> ಬಂಧು ವಿರೋಧೀ ಕ್ರೂರೇ ಸೌಮ್ಯಃ ಪುನರೀಶ್ವರಃ ಖಚರೇ ॥

ತೃತೀಯೇಶನು ಕ್ರೂರಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದರೆ ಜಾತಕನು ಭಿಕ್ಷುಕನು, ಧನರಹಿತನು, ಅಲ್ಪಾಯು, ಬಂಧು-ಬಾಂಧವರೊಂದಿಗೆ ವಿರೋಧತೆ ಉಳ್ಳವನು ಆಗುತ್ತಾನೆ.

ತೃತೀಯೇಶನು ಶುಭಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದರೆ ಜಾತಕನು ಧನವಂತನು ಆಗುತ್ತಾನೆ.

ಯವನಜಾತಕ

> ಯದಿ ಧನಗೇ ಸಹಜೇಶೇ ಭಿಕ್ಷುರ್ಧನಾಲ್ಪ ಜೀವಿತಃ ಪುರುಷಃ ।
> ಬಂಧು ವಿರೋಧೀ ಕ್ರೂರೈಃ ಸೌಮ್ಯೈಃ ಪುನರೀಶ್ವರಃ ಖ ವರೈಃ ॥

ತೃತೀಯೇಶನು ಕ್ರೂರಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು, ಭಿಕ್ಷು, ಅಲ್ಪಧನದಿಂದ ಜೀವಿಸುತ್ತಾನೆ, ಬಂಧು-ಬಾಂಧವರೊಂದಿಗೆ ವಿರೋಧತೆ ಇರುತ್ತದೆ. ತೃತೀಯೇಶನು ಶುಭಗ್ರಹನಾಗಿ ತೃತೀಯಭಾವದಲ್ಲಿ ಇದ್ದಾಗ ಜಾತಕನು ಶ್ರೇಷ್ಠ ಒಡೆಯನು ಆಗುತ್ತಾನೆ.

ಅನುಭವದಲ್ಲಿ - ತೃತೀಯೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಆರ್ಥಿಕ ಸಂಕಷ್ಟಗಳಿಂದ ಪೀಡಿತನು, ಯಾವಾಗಲೂ ಹಣದ ಅಡಚಣೆ ಕಂಡುಬರುತ್ತದೆ. ಸಾಲದ ವ್ಯಾಪಾರದಿಂದ ಜಾತಕನ ಭಂಡವಾಳದ ಹಣವು ಸಾಲ ವ್ಯಾಪಾರ ಪಡೆದವರ ಕೈಯಲ್ಲಿದ್ದು, ಸೂಕ್ತಕಾಲದಲ್ಲಿ ಜಾತಕನಿಗೆ ಲಭಿಸದೇ ಇರುವುದರಿಂದ ಆತನ ದೈನಂದಿಕ ವ್ಯವಹಾರಕ್ಕೆ ಅಡಚಣೆ ಉಂಟಾಗುತ್ತದೆ, ಕುಟುಂಬೀಯರೊಂದಿಗೆ ವಿವಾದ ಸಂಭವಿಸುತ್ತದೆ, ಸಹೋದರರೊಂದಿಗೆ ಕಲಹ ಉಂಟಾಗುತ್ತದೆ, ತೃತೀಯೇಶನು ಶುಭಗ್ರಹನಾದರೆ ಜಾತಕನು ಎಲ್ಲ ಅಡಚಣೆಯನ್ನು ಬುದ್ಧಿವಂತಿಕೆ ಮತ್ತು ಚತುರತೆಯಿಂದ ಎದುರಿಸಿ ಕಾರ್ಯಸಾಧನೆ ಮಾಡುತ್ತಾನೆ.

## ೨೭. ತೃತೀಯಭಾವಗತ ತೃತೀಯೇಶಫಲ

**ಪರಾಶರಹೋರಾ**

**ಸಹಜೇ ಸಹಜಾಧೀಶೇ ಸಹೋದರ ಸುಖಾನ್ವಿತಃ ।**
**ಧನಪುತ್ರಯುತೋಽಹೃಷ್ಟೋ ಭುನಕ್ತಿ ಸುಖಮದ್ಭುತಮ್ ॥**

ತೃತೀಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಸಹೋದರಸುಖ ಇರುತ್ತದೆ, ಧನ ಮತ್ತು ಪುತ್ರರಿಂದ ಸಂತೋಷಗೊಂಡವನು ಮತ್ತು ಅಧಿಕಸುಖವಂತನು ಆಗುತ್ತಾನೆ.

**ಮಾನಸಾಗರೀ**

**ಸಹಜಗತೇ ಸಹಜಪತಿಃ ಸಮುಸತ್ತ್ವಂ ಸುಸುಹೃದಂ ಶುಭಸ್ವಜನಮ್ ।**
**ದೇವಗುರುಪೂಜನರತಂ ನೃಪಲಾಭಪರಂ ನರಂ ಕುರುತೇ ॥**

ತೃತೀಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸರಿಸಮಾನ ಬಲಶಾಲಿಯು, ಉತ್ತಮಮಿತ್ರರು, ಶುಭದಾಯಕರಾದ ಸ್ವಜನ ಸಂಪನ್ನನು, ದೇವರ ಮತ್ತು ಗುರುವಿನ ಪೂಜೆಯಲ್ಲಿ ತಲ್ಲೀನನು, ರಾಜನಿಗೆ ಲಾಭಮಾಡುವವನು ಆಗುತ್ತಾನೆ.

**ಯವನಜಾತಕ**

**ಸಹಜಗತೇ ಸಹಜಪತೌ ನೃಪಮಂತ್ರೀ ಸೌಹೃದೇಽತಿ ನಿಪುಣಶ್ಚ ।**
**ಗುರುಪೂಜನ ನಿರತೋ ವೈ ನೃಪತೋ ಲಾಭಂ ಪರಂ ನರಂ ಕುರುತೇ ॥**

ತೃತೀಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ರಾಜನು, ಮಂತ್ರಿಯು, ಮಿತ್ರತೆಯಲ್ಲಿ ಅತಿ ನಿಪುಣನು, ಗುರುಪೂಜನ ತತ್ಪರನು ಆಗುತ್ತಾನೆ ಮತ್ತು ರಾಜನಿಂದ ಪರಮಲಾಭವನ್ನು ಪಡೆಯುತ್ತಾನೆ.

ಅನುಭವದಲ್ಲಿ - ತೃತೀಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಉತ್ತಮ ಹುದ್ದೆಯಲ್ಲಿದ್ದು, ಪರಿಶ್ರಮದಿಂದ ದುಡಿದು ಉನ್ನತ ಪದವಿ ಮತ್ತು ಧನ ಪಡೆಯುತ್ತಾನೆ, ಜಾತಕನು ಸುಖವಂತನು, ಗುರು ಹಿರಿಯರ ಆರಾಧಕನು,

ತೀರ್ಥಯಾತ್ರೆ, ದೇವರಸೇವೆ ಮತ್ತು ಪೂಜೆ ಮಾಡುತ್ತಾನೆ, ಜಾತಕನು ನಿಪುಣನು, ಪರಿಶ್ರಮ ಸಾಹಸ ಮತ್ತು ನಿರಂತರ ದುಡಿಮೆಯಿಂದ ಅಭಿವೃದ್ಧಿ ಹೊಂದುತ್ತಾನೆ. ತೃತೀಯೇಶನು ಪಾಪಗ್ರಹನಾದರೆ ಕೈ, ಎದೆ ಅಥವಾ ಕುತ್ತಿಗೆ ನೋವು ಇರುತ್ತದೆ.

## ೨೮. ಚತುರ್ಥಭಾವಗತ ತೃತೀಯೇಶಫಲ

**ಪರಾಶರಹೋರಾ**

**ಸುಖಸ್ಥೇ ಸಹಜಾಧೀಶೇ ಸುಖೀ ಚ ಧನಸಂಯುತಃ ।**
**ಮತಿಮಾನ್ ಜಾಯತೇ ಬಾಲೋ ದುಷ್ಟಭಾರ್ಯಾಪತಿಶ್ಚ ಸಃ ॥**

ತೃತೀಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಸುಖವಂತನು, ಧನ ಕೂಡಿಟ್ಟವನು, ಬುದ್ಧಿವಂತನು ಮತ್ತು ದುಷ್ಟಸ್ತ್ರೀಯಪತಿಯು ಆಗುತ್ತಾನೆ.

**ಮಾನಸಾಗರೀ**

**ಭ್ರಾತೃಪತೌ ಮಾತೃಗತೇ ಪಿತೃಬಂಧುಸಹೋದರೇಷು ಸುಖಭೋಗಿ ।**
**ಮಾತ್ರಾ ಸಹವೈರಕರಃ ಪಿತೃವಿತ್ತಸ್ಯ ಭಕ್ಷಕಃ ಪುರುಷಃ ॥**

ತೃತೀಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ತಂದೆ, ಬಂಧು-ಬಾಂಧವರು ಮತ್ತು ಸಹೋದರರೊಂದಿಗೆ ಸುಖಭೋಗವನ್ನು ಅನುಭವಿಸುತ್ತಾನೆ, ತಾಯಿಯೊಂದಿಗೆ ವೈರತ್ವ ಮಾಡುವವನು ಮತ್ತು ತಂದೆಯ ಧನ-ಸಂಪತ್ತನ್ನು ಉಪಭೋಗ ಮಾಡುತ್ತಾನೆ.

**ಯವನಜಾತಕ**

**ಭ್ರಾತೃಪತೌ ತುರ್ಯಗತೇ ಪಿತೃಮೋದಸುಖ ಮುದಯಕೃತ್ತೇಷಾಮ್ ।**
**ಮಾತುರ್ವೈರಕರಶ್ಚ ಪಾಪೈಃ ಪಿತ್ರರ್ಥ ಭಕ್ಷಕಃ ಪುರುಷಃ ॥**

ತೃತೀಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆಯಿಂದ ಆನಂದ, ಸುಖ ಪಡೆಯುತ್ತಾನೆ ಮತ್ತು ಅವರನ್ನು ಸಂತೋಷಪಡಿಸುತ್ತಾನೆ, ತಾಯಿಯೊಂದಿಗೆ ವೈರತ್ವ ಮಾಡುವವನು ಆಗುತ್ತಾನೆ, ತೃತೀಯೇಶನು ಪಾಪಗ್ರಹನಾದರೆ ತಂದೆಯ ಧನ-ಭೋಗ ಮಾಡುತ್ತಾನೆ.

ಅನುಭವದಲ್ಲಿ - ತೃತೀಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಸ್ವಾರ್ಜಿತವಿತ್ತ ಉಳ್ಳವನು, ಬುದ್ಧಿವಂತನು, ಸುಖಿವಂತನು, ಪಿತ್ರಾರ್ಜಿತ ಸಂಪತ್ತು ಲಭಿಸುತ್ತದೆ, ಕೈ ಕೆಲಸದಲ್ಲಿ ಕುಶಲನು, ಗೃಹದಲ್ಲಿ ಪಾಲಿನ ವಿಚಾರ ಕಲಹ ಉಂಟಾಗುತ್ತದೆ, ದೀರ್ಘಕಾಲದ ನಂತರ ಜಾತಕನು ಪರಿಶ್ರಮದಿಂದ ನೂತನ ಮನೆಯನ್ನು ಕಟ್ಟಿಸುತ್ತಾನೆ, ಪತ್ನಿಯಲ್ಲಿ ವಾದ-ವಿವಾದ ಪ್ರವೃತ್ತಿ ಇರುವುದರಿಂದ ಜಾತಕನು ನೂತನ ಮನೆಯಲ್ಲಿ ವಾಸಿಸುತ್ತಾನೆ, ತಾಯಿಯೊಂದಿಗೆ ವಿವಾದ ಇರುತ್ತದೆ.

## ೨೯. ಪಂಚಮಭಾವಗತ ತೃತೀಯೇಶಫಲ

**ಪರಾಶರಹೋರಾ**

> **ಸುತಸ್ಥೇ ಸಹಜಾಧೀಶೇ ಪುತ್ರವಾನ್ ಗುಣಸಂಯುತಃ ।**
> **ಭಾರ್ಯಾತಸ್ಯ ಭವೇತ್ ಕ್ರೂರಾ ಕ್ರೂರಗ್ರಹಯುತೇಕ್ಷಿತೇ ॥**

ತೃತೀಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಪುತ್ರವಂತನು, ಗುಣವಂತನು ಆಗುತ್ತಾನೆ. ಪಂಚಮಭಾವದಲ್ಲಿ ಕ್ರೂರಗ್ರಹರಿದ್ದಾಗ ಅಥವಾ ಕ್ರೂರಗ್ರಹರು ಪಂಚಮಭಾವವನ್ನು ನೋಡಿದರೆ ಜಾತಕನ ಪತ್ನಿಯು ಕ್ರೂರಸ್ವಭಾವದವಳು ಆಗಿರುತ್ತಾಳೆ.

**ಮಾನಸಾಗರೀ**

> **ದುಶ್ಚಿಕ್ಯಪತೌ ಸುತಗೇ ಸುತಬಾಂಧವ ಸುತಸಹೋದರೈಃ ಪಾಲ್ಯಃ ।**
> **ದೀರ್ಘಾಯುರ್ಭವತಿ ನರಃ ಪರೋಪಕಾರೈಕನಿರತಮತಿಶ್ಚ ॥**

ತೃತೀಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಆತನ ಪುತ್ರರು, ಬಂಧು-ಬಾಂಧವರು, ಸಹೋದರರು ಮತ್ತು ಅವರ ಮಕ್ಕಳಿಂದ ಪಾಲನೆ ಮಾಡಲ್ಪಡುತ್ತಾನೆ, ದೀರ್ಘಾಯುಷ್ಯ ಉಳ್ಳವನು, ಪರೋಪಕಾರ ವಿಚಾರದಿಂದ ಕೂಡಿದವನು ಆಗುತ್ತಾನೆ.

ಯವನಜಾತಕ

ಸಹಜಪತೇ ಸುತಗೇ ಬಹುಬಾಂಧವ್ಯೆ: ಸುತ ಸಹೋದರಪಾಲ ಧನೀ ಸುಖೀ ।
ವಿಷಯಭುಕ್ಪರಕಾರ್ಯಕರ: ಕ್ಷಮೀ ಲಲಿತಮೂರ್ತಿರಸೌಚಿರ ಜೀವಿತ: ॥

ತೃತೀಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಹೆಚ್ಚು ಬಂಧು-ಬಾಂಧವರು ಉಳ್ಳವನು, ಪುತ್ರ ಮತ್ತು ಸಹೋದರರ ಪಾಲನೆ ಮಾಡುವವನು, ಧನವಂತನು, ಸುಖವಂತನು ಆಗುತ್ತಾನೆ, ವಿಷಯಭೋಗವಂತನು, ಪರರ ಕೆಲಸ ಮಾಡುವವನು, ಕ್ಷಮಾಗುಣ ಉಳ್ಳವನು, ಸುಂದರ ಆಕಾರ ಮತ್ತು ಚಿರಕಾಲ ಜೀವಿಸುತ್ತಾನೆ.

ಅನುಭವದಲ್ಲಿ - ತೃತೀಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಗುಣವಂತನು, ಸುಖವಂತನು ಮತ್ತು ಉತ್ತಮ ಸಂತಾನ ಪಡೆಯುತ್ತಾನೆ, ಮಕ್ಕಳು ಬುದ್ಧಿವಂತರು, ವಿದ್ಯಾವಂತರು ಮತ್ತು ಸಾಹಸಕಾರ್ಯ ಮಾಡುತ್ತಾರೆ, ತೃತೀಯೇಶನು ಪಾಪಗ್ರಹನಾದರೆ, ಸಂತಾನ ನಷ್ಟಯೋಗ ಇರುತ್ತದೆ, ಆದ್ದರಿಂದ ಸೂಕ್ತ ಪರಿಹಾರ ಮತ್ತು ಔಷಧಿಸೇವನೆಯಿಂದ ಉತ್ತಮ ಸಂತಾನ ಪ್ರಾಪ್ತಿಯಾಗುತ್ತದೆ, ಪಂಚಮಭಾವಸ್ಥಿತ ತೃತೀಯೇಶನಿಂದ ಜಾತಕನಿಗೆ ಉದರವೇದನೆ ಮತ್ತು ಮಾನಸಿಕ ಅಶಾಂತಿ, ಮಕ್ಕಳ ಆರೋಗ್ಯ ಮತ್ತು ಭವಿಷ್ಯದ ಚಿಂತೆ ಯಾವಾಗಲೂ ಇರುತ್ತದೆ. ಪತ್ನಿಯು ಸಿಡುಕು ಸ್ವಭಾವದವಳು ಮತ್ತು ಕಾಲಿನಲ್ಲಿ ವೇದನೆ ಇರುತ್ತದೆ.

## ೩೦. ಷಷ್ಠಭಾವಗತ ತೃತೀಯೇಶಫಲ

ಪರಾಶರಹೋರಾ

ಷಷ್ಠಭಾವೇ ತೃತೀಯೇಶೇ ಭ್ರಾತೃಶತ್ರುರ್ಮಹಾಧನೀ ।
ಮಾತುಲೈಶ್ಚ ಸಮಂ ವೈರಂ ಮಾತುಲಾನೀ ಪ್ರಿಯೋ ನರ: ॥

ತೃತೀಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಸಹೋದರರಿಗೆ ಶತ್ರುವು ದೊಡ್ಡ ಶ್ರೀಮಂತನು, ಸೋದರಮಾವನೊಂದಿಗೆ ಸಮ-ವೈರತ್ವ ಇರುತ್ತದೆ, ಮತ್ತು ಸೋದರಮಾವನ ಹೆಂಡತಿಗೆ ಪ್ರಿಯನಾದವನು ಆಗುತ್ತಾನೆ.

**ಮಾನಸಾಗರೀ**

> ಷಷ್ಠಗತೇ ಸಹಜಪತೌ ಬಂಧುವಿರೋಧಿ ನಯನರೋಗಿ ಚ ।
> ಭೂಲಾಭೋ ಭವತಿ ಭೃಶಂ ಕದಾಚಿದಪಿ ರೋಗಸಂಕಲಿತಃ ॥

ತೃತಿಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಬಂಧು-ಬಾಂಧವರ ವಿರೋಧಿಯು, ಕಣ್ಣಿನರೋಗಿಯು ಆಗುತ್ತಾನೆ. ಭೂಮಿ ಲಭಿಸುತ್ತದೆ, ಕೆಲವೊಮ್ಮೆ ರೋಗದಿಂದ ಪೀಡಿತನು ಆಗುತ್ತಾನೆ.

**ಯವನಜಾತಕ**

> ರಿಪುಗತೇ ಸಹಜಾಧಿಪತೌ ಭವೇನ್ನಯನರೋಮಯುತೋ ರಿಪುಮಾನ್ ಭವೇತ್ ।
> ಸಹಜ ಸಜ್ಜನತೋಽಪಿ ಚ ದುಷ್ಕೃತಾ ಕ್ರಯಯುತೋಽಥರುಜಾ ಪರಿಪೀಡಿತಃ ॥

ತೃತೀಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು, ಕಣ್ಣಿನ ರೋಗ ಉಳ್ಳವನು, ಶತ್ರುಗಳು ಉಳ್ಳವನು, ಸಜ್ಜನರೊಂದಿಗೆ ಮತ್ತು ಸಹೋದರರೊಂದಿಗೆ ದುಷ್ಕೃತೆ ಇರುತ್ತದೆ, ಕ್ರಯ-ವಿಕ್ರಯ ಕುಶಲನು ಮತ್ತು ರೋಗಪೀಡಿತನು ಆಗುತ್ತಾನೆ.

ಅನುಭವದಲ್ಲಿ - ತೃತಿಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಸಹೋದರರೊಂದಿಗೆ ವಾದ-ವಿವಾದ ಮತ್ತು ಕಲಹ ಇರುತ್ತದೆ, ಸೋದರಮಾವನೊಂದಿಗೆ ಬೇಧಾಭಿಪ್ರಾಯ ಇರುತ್ತದೆ, ಭೂಮಿ ಲಭಿಸುತ್ತದೆ, ಶತ್ರುಗಳಿಂದ ಪೀಡಿಸಲ್ಪಡುತ್ತಾನೆ, ಸ್ವತಂತ್ರ ಉದ್ಯಮದಲ್ಲಿ ಜಾತಕನಿಗೆ ಅಲ್ಪ ಲಾಭ ಉಳಿಯುತ್ತದೆ, ಆದ್ದರಿಂದ ಉತ್ಪನ್ನ ತಯಾರಕ ಸಂಸ್ಥೆಗಳ ಅಧಿಕೃತ ಮಾರಾಟಗಾರನಾಗಿ, ವ್ಯಾಪಾರ ವ್ಯವಹಾರ ಮಾಡಿದರೆ ಕಮ್ಮಿ ಬಂಡವಾಳದಿಂದ ಅಧಿಕಲಾಭ ಪಡೆಯಬಹುದು.

## ೩೧. ಸಪ್ತಮಭಾವಗತ ತೃತೀಯೇಶಫಲ

**ಪರಾಶರಹೋರಾ**

> ಸಪ್ತಮೇ ಸಹಜಾಧೀಶೇ ರಾಜಸೇವಾಪರೋ ನರಃ ।
> ಬಾಲ್ಯೇ ದುಃಖೀ ಸುಖೀ ಚಾಂತ್ಯೇ ಜಾಯತೇ ನಾಽತ್ರ ಸಂಶಯಃ ॥

ತೃತೀಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ರಾಜಸೇವಕನು, ಬಾಲ್ಯಕಾಲದಲ್ಲಿ ದುಃಖಿತನು, ಅಂತ್ಯಕಾಲದಲ್ಲಿ ಸುಖಿವಂತನು ಆಗುತ್ತಾನೆ, ಇದರಲ್ಲಿ ಸಂಶಯವಿಲ್ಲ.

**ಮಾನಸಾಗರೀ**

**ಸಪ್ತಮಗೇ ಸಹಜೇಶೇ ನರಸ್ಯ ಭಾರ್ಯಾ ಭವೇತ್ಸುಶೀಲಾ ಚ ।**
**ಸೌಭಾಗ್ಯವತೀ ಯುವತೀ ಕ್ರೂರೇ ದೇವರಗೃಹಂ ಯಾತಿ ॥**

ತೃತೀಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಸದ್ಗುಣವಂತಳು, ಸೌಭಾಗ್ಯವತಿಯು ಆಗುತ್ತಾಳೆ, ತೃತಿಯಾಧಿಪತಿಯು ಕ್ರೂರಗ್ರಹನಾದರೆ ಆತನ ಪತ್ನಿಯು ಮೈದುನನ ಮನೆಗೆ ಹೋಗುತ್ತಾಳೆ.

**ಯವನಜಾತಕ**

**ಯುವತಿ ವೈರಕ್ಯದಲ್ಪಪರಾಕ್ರಮೋ ಸಹಜಭಾವಪತೌ ಮದಗೇ ನರಃ ।**
**ಸುಭಗಸುಂದರರೂಪವತೀ ಸತೀಯುವತಿ ಪಾಪಗ್ರಹೇಷು ರತೋ ಭವೇತ್ ॥**

ತೃತೀಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಸ್ತ್ರೀಯೊಂದಿಗೆ ವೈರತ್ಯ ಮತ್ತು ಸ್ವಲ್ಪ ಪರಾಕ್ರಮ ಉಳ್ಳವನು, ಸ್ತ್ರೀಯು ಭಾಗ್ಯವಂತಳು, ರೂಪವತಿಯು ಆಗಿರುತ್ತಾಳೆ.

ತೃತೀಯೇಶನು ಕ್ರೂರಗ್ರಹನಾದರೆ ಜಾತಕನು ಸ್ತ್ರೀರತನು ಆಗುತ್ತಾನೆ.

ಅನುಭವದಲ್ಲಿ - ತೃತಿಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಸ್ವತಂತ್ರ ಉದ್ಯಮಗಳಲ್ಲಿ ಅಧಿಕಲಾಭ ಸಿಗುವುದಿಲ್ಲ, ನೌಕರಿಯಲ್ಲಿ ಅಥವಾ ಇತರ ಸಂಸ್ಥೆಗಳ ಪತಿನಿಧಿಯಾಗಿ ವ್ಯಾಪಾರ-ವ್ಯವಹಾರ ಅಥವಾ ಸಂಚಾರ ಉದ್ಯಮ ಮಾಡಿದರೆ ಲಾಭ ಸಿಗುತ್ತದೆ, ಜಾತಕನ ಪತ್ನಿಯು ಸದ್ಗುಣವಂತಳು ಧೈರ್ಯವಂತಳು ಮತ್ತು ಕುಶಲ ಆಡಳಿತ ನಿರ್ವಹಿಸುತ್ತಾಳೆ.

## ೩.೨. ಅಷ್ಟಮಭಾವಗತ ತೃತೀಯೇಶಫಲ

**ಪರಾಶರಹೋರಾ**

> **ಅಷ್ಟಮೇ ಸಹಜಾಧೀಶೇ ಜಾತಶ್ಚೌರೋ ನರೋ ಭವೇತ್ ।**
> **ದಾಸವೃತ್ತ್ಯೋಪಜೀವೀ ಚ ರಾಜದ್ವಾರೇ ಮೃತಿರ್ಭವೇತ್ ॥**

ತೃತೀಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕಳ್ಳನು ಆಗುತ್ತಾನೆ, ಸೇವಕವೃತ್ತಿಯಿಂದ ಜೀವಿಸುತ್ತಾನೆ ಮತ್ತು ರಾಜನ ಅರಮನೆಯ ದ್ವಾರದ ಸ್ಥಳದಲ್ಲಿ ಮರಣ ಹೊಂದುತ್ತಾನೆ.

**ಮಾನಸಾಗರೀ**

> **ಭ್ರಾತೃಪತಿರಷ್ಟಮಗಃ ಸಹಜಂ ಮೃತಸೋದರಂ ನರಂ ಕುರುತೇ ।**
> **ಕ್ರೂರೇ ಬಾಹುವ್ಯಂಗಿನಮಪಿ ಜೀವತಿ ಯದ್ಯಷ್ಟ ವರ್ಷಾಣಿ ॥**

ತೃತೀಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನ ಸಹೋದರನ ಮರಣ ಆಗುತ್ತದೆ, ತೃತೀಯೇಶನು ಕ್ರೂರಗ್ರಹನಾದರೆ ಜಾತಕನು ಬಾಹುರೋಗದಿಂದ ಪೀಡಿತನು ಆಗುತ್ತಾನೆ ಮತ್ತು ಎಂಟು ವರ್ಷ ಬಾಳುತ್ತಾನೆ.

**ಯವನಜಾತಕ**

> **ಸಹಜಪೇಽಷ್ಟಮಗೇ ಸರುಷೋ ನರೋ ಮೃತಸಹೋದರ ಮಿತ್ರಜನಃ ಖಲೈಃ ।**
> **ಶುಭಖಗಃ ಶುಭತಾಧನಯುಗ್ಭವೇತ್ಸ್ಯಯಮಪಿ ಪೃಚುರಾಮಯವಾನ್ಭವೇತ್ ॥**

ತೃತೀಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕ್ರೋಧಿಯು ಆಗುತ್ತಾನೆ. ತೃತೀಯೇಶನು ಕ್ರೂರಗ್ರಹನಾದರೆ ಜಾತಕನು ಸಹೋದರ ಮತ್ತು ಮಿತ್ರರು ಇಲ್ಲದವನು ಆಗುತ್ತಾನೆ. ತೃತೀಯೇಶನು ಶುಭಗ್ರಹನಾದರೆ ಶುಭತ್ವ, ಧನಕೂಡುವಿಕೆ ಹಾಗೂ ಹೆಚ್ಚಾದ ರೋಗವಂತನು ಆಗುತ್ತಾನೆ.

ಅನುಭವದಲ್ಲಿ - ತೃತೀಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಸಾಹಸ ಕಾರ್ಯಗಳನ್ನು ಮಾಡುತ್ತಾನೆ, ಆದರೆ ಕೆಲವೊಮ್ಮೆ ಹಾನಿಗೀಡಾಗುತ್ತಾನೆ, ಉದ್ಯೋಗದಲ್ಲಿ ಪರಿಶ್ರಮ ಮತ್ತು ಚತುರತೆಯಿಂದ ಧನಸಂಪತ್ತನ್ನು ಗಳಿಸುತ್ತಾನೆ.

ತೃತೀಯಾಧಿಪತಿಯು ಕ್ರೂರಗ್ರಹನಾದರೆ ಸಹೋದರರೊಂದಿಗೆ ಕಲಹ ಕೈಕೊಂಡ ಕಾರ್ಯಗಳಲ್ಲಿ ಹಾನಿ ಮತ್ತು ಸಹೋದರರನ್ನು ಕಳಕೊಳ್ಳುತ್ತಾನೆ.

## ೩೩. ನವಮಭಾವಗತ ತೃತೀಯೇಶಫಲ

**ಪರಾಶರಹೋರಾ**

**ನವಮೇ ಸಹಜಾಧೀಶೇ ಪಿತುಃ ಸುಖವಿವರ್ಜಿತಃ ।**
**ಸ್ತ್ರೀಭಿರ್ಭಾಗ್ಯೋದಯಸ್ತಸ್ಯ ಪುತ್ರಾದಿಸುಖಸಂಯುತಃ ॥**

ತೃತೀಯೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತಂದೆಯ ಸುಖ ಕಳಕೊಂಡವನು ಮತ್ತು ಪತ್ನಿಯಿಂದ (ವಿವಾಹ ಆದ ನಂತರ) ಭಾಗ್ಯೋದಯ ಆಗುತ್ತದೆ. ಪುತ್ರಪ್ರಾಪ್ತಿ ಮತ್ತು ಸಕಲಸುಖ ಲಭಿಸುತ್ತದೆ.

**ಮಾನಸಾಗರೀ**

**ಧರ್ಮಗತೇ ಸಹಜಪತೌ ಕ್ರೂರೇ ಬಂಧೂಜ್ಝಿತಸ್ತಥಾ ಸೌಮ್ಯೇ ।**
**ಸದ್‌ಬಾಂಧವಶ್ಚ ಸುಕೃತೀಂ ಸೋದರಭಕ್ತೋ ಭವೇನ್ಮನುಜಃ ॥**

ತೃತೀಯೇಶನು ಪಾಪಗ್ರಹನಾಗಿ ನವಮಭಾವದಲ್ಲಿ ಇದ್ದಾಗ ಜಾತಕನು ಸಹೋದರರಿಂದ ತ್ಯಜಿಸಲ್ಪಡುತ್ತಾನೆ. ತೃತೀಯಾಧಿಪತಿಯು ಶುಭಗ್ರಹನಾದರೆ ಜಾತಕನು ಉತ್ತಮ ಬಂಧು-ಬಾಂಧವರಿಂದ ಕೂಡಿದವನು, ಪುಣ್ಯಕಾರ್ಯಗಳನ್ನು ಮಾಡುತ್ತಾನೆ, ಹಾಗೂ ತನ್ನ ಸಹೋದರರಲ್ಲಿ ಪ್ರೀತಿ ಉಳ್ಳವನು ಆಗುತ್ತಾನೆ.

**ಯವನಜಾತಕ**

**ಸಹಜಭಾವಪತೌ ನವಮಸ್ಥಿತೇ ಸಹಜವರ್ಗರತೋಽಪಿ ವನಾಶ್ರಯಃ ।**
**ಭವತಿ ಬಾಲಯುತೋಽಥ ಪರಾಕ್ರಮೀ ಶುಭಮತಿಃ ಖಲಖೇಟಗೃಹೇಽನ್ಯಥಾ ॥**

ತೃತೀಯೇಶನು ಶುಭಗ್ರಹನಾಗಿ ನವಮಭಾವದಲ್ಲಿ ಇದ್ದಾಗ ಜಾತಕನು ಸಹೋದರರೊಂದಿಗೆ ಅನುರಾಗ ಉಳ್ಳವನಾದರೂ ಕಾಡಿನಲ್ಲಿ ವಾಸ ಮಾಡುತ್ತಾನೆ, ಪುತ್ರವಂತನು ಪರಾಕ್ರಮಿ ಮತ್ತು ಸದ್ಬುದ್ಧಿಯುವನು ಆಗುತ್ತಾನೆ, ತೃತೀಯೇಶನು ಪಾಪಗ್ರಹನಾದರೆ ವಿಪರೀತಫಲ ಆಗುತ್ತದೆ.

ಅನುಭವದಲ್ಲಿ ತೃತೀಯೇಶನು ನವಮಭಾವದಲ್ಲಿ ಇದ್ದಾಗ ಜಾತಕನಿಗೆ (ವಿವಾಹ ಆದ ನಂತರ), ಅಥವಾ ಸ್ತ್ರೀಯರಿಂದ ಭಾಗ್ಯೋದಯ ಆಗುತ್ತದೆ, ತಂದೆಯೊಂದಿಗೆ ಬೇದಾಭಿಪ್ರಾಯ ಇರುತ್ತದೆ, ತಂದೆಯು ಆರ್ಥಿಕ ಸಂಕಷ್ಟಗಳಿಂದ ಪೀಡಿಸಲ್ಪಡುತ್ತಾನೆ, ತೃತೀಯೇಶನು ಶುಭಗ್ರಹನಾದರೆ ಜಾತಕನು ಸಹೋದರರ ಏಳಿಗೆಗೆ ಸಹಾಯಕನು ಆಗುತ್ತಾನೆ ಹಾಗೂ ದೇವರ ಅನುಗ್ರಹದಿಂದ ಅಭಿವೃದ್ಧಿ ಹೊಂದುತ್ತಾನೆ, ತೃತೀಯೇಶನು ಪಾಪಗ್ರಹನಾದರೆ ಜಾತಕನಿಗೆ ಸಹೋದರರೊಂದಿಗೆ ಕಲಹ ಅಥವಾ ನಷ್ಟ ಸಂಭವಿಸುತ್ತದೆ. ಅಧಿಕ ಪರಿಶ್ರಮದಿಂದ ದುಡಿದರೂ ಸೂಕ್ತ ಪ್ರತಿಫಲ ಲಭಿಸುವುದಿಲ್ಲ, ಆದರೂ ಇವರು ಸತತ ಪ್ರಯತ್ನದಿಂದ ದುಡಿದು ದೀರ್ಘಕಾಲದ ನಂತರ ಏಳಿಗೆ ಹೊಂದುತ್ತಾರೆ.

## ೩೪. ದಶಮಭಾವಗತ ತೃತೀಯೇಶಫಲ

**ಪರಾಶರಹೋರಾ**

> **ದಶಮೇ ಸಹಜಾಧೀಶೇ ಜಾತಃ ಸರ್ವಸುಖಾನ್ವಿತಃ ।**
> **ಸ್ವಭುಜಾರ್ಜಿತ ವಿತ್ತಶ್ಚ ದುಷ್ಟಸ್ತ್ರೀಭರಣೇ ರತಃ ॥**

ತೃತೀಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಸಕಲ ಸುಖಿ ಉಳ್ಳವನು, ತನ್ನ ಬಾಹುಬಲದಿಂದ ಗಳಿಸಿದ ಧನ-ಸಂಪತ್ತು ಉಳ್ಳವನು, ದುಷ್ಟ ಸ್ತ್ರೀಯರನ್ನು ಸಾಕುವವನು ಆಗುತ್ತಾನೆ.

**ಮಾನಸಾಗರೀ**

> **ದುಶ್ಚಿಕ್ಯೇಶೇ ದಶಮಗತೇ ನೃಪಪೂಜ್ಯೋ ಮಾತೃಬಂಧು ಪಿತೃಭಕ್ತಃ ।**
> **ಉತ್ತಮಬೋಧೋ ಬಂಧುಷು ವಿನಿಶ್ಚಿತೋ ಜಾಯತೇ ಜಾತಃ ॥**

ತೃತೀಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಪೂಜಿತನು, ತಾಯಿ, ಬಂಧು-ಬಾಂಧವ ಮತ್ತು ತಂದೆಯಲ್ಲಿ ಪ್ರೀತಿ ಉಳ್ಳವನು, ಉತ್ತಮ ಜ್ಞಾನಿಯು ಮತ್ತು ಬಂಧುಗಳೊಂದಿಗೆ ವಿನಯತೆಯಿಂದ ಇರುತ್ತಾನೆ.

**ಯವನಜಾತಕ**

> ಸಹಜಪೇ ದಶಮೇ ಚ ನೃಪಾತ್ಸುಖಂ ಪಿತೃಜನೈಃ ಕುಲವೃದ್ಧಜನಾಶ್ರಯಃ ।
> ಬಹುಸುಭಾಗ್ಯಯುತೋ ನಯನೋತ್ಸವೋ ಭವತಿ ಮಿತ್ರಯುತೋಽತಿತರಾಂ ಶುಚಿಃ ॥

ತೃತೀಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಸುಖಿ, ಪಿತೃಜನರಿಗೆ ಮತ್ತು ಕುಲದ ವೃದ್ಧಜನರಿಗೆ ಆಶ್ರಯದಾತನು, ಅತಿಭಾಗ್ಯವಂತನು, ಉತ್ಸವ ಸಮಾರಂಭಾದಿ ನಡೆಸುತ್ತಾನೆ, ಮಿತ್ರರೊಂದಿಗೆ ಕೂಡಿದವನು ಮತ್ತು ಅತಿಪವಿತ್ರನು ಆಗುತ್ತಾನೆ.

ಅನುಭವದಲ್ಲಿ - ತೃತೀಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಸತತ ಪ್ರಯತ್ನ ಮತ್ತು ಪರಿಶ್ರಮದಿಂದ ದುಡಿದು, ಹಾಗೂ ಹಲವಾರು ಸಂಕಷ್ಟಗಳನ್ನು ಎದುರಿಸಿ ಧನ-ಸಂಪತ್ತನ್ನು ಗಳಿಸಿ ಅಭಿವೃದ್ಧಿ ಹೊಂದುತ್ತಾರೆ. ಉತ್ಪಾದನಾ ಸಂಸ್ಥೆಯ ಪ್ರತಿನಿಧಿಯಾಗಿ ಅಥವಾ ಅಧಿಕೃತ ಮಾರಾಟಗಾರರಾಗಿ ವ್ಯಾಪಾರ ನಿರ್ವಹಿಸಿದರೆ ಅಭಿವೃದ್ಧಿ ಹೊಂದುತ್ತಾರೆ.

## ೩.೫. ಏಕಾದಶ ಭಾವಗತ ತೃತೀಯೇಶಫಲ

**ಪರಾಶರಹೋರಾ**

> ಲಾಭಗೇ ಸಹಜಾಧಿಶೇ ವ್ಯಾಪಾರೇ ಲಾಭವಾನ್ ಸದಾ ।
> ವಿದ್ಯಾಹೀನೋಽಪಿ ಮೇಧಾವೀ ಸಾಹಸೀ ಪರಸೇವಕಃ ॥

ತೃತೀಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ವ್ಯಾಪಾರದಲ್ಲಿ ಯಾವಾಗಲೂ ಲಾಭ ಹೊಂದುತ್ತಾನೆ, ವಿದ್ಯಾಭ್ಯಾಸ ಇಲ್ಲದವನಾದರೂ ಮೇಧಾವಿಯು ಆಗಿರುತ್ತಾನೆ, ಸಾಹಸಿ ಮತ್ತು ಪರಸೇವಕನು ಆಗುತ್ತಾನೆ.

**ಮಾನಸಾಗರೀ**

> ಲಾಭಸ್ಥಃ ಸಹಜೇಶಃ ಸುಬಾನ್ಧವ ರಾಜಶಾಲಿನಂ ಕುರುತೇ ।
> ಕುರುತೇ ಬಂಧುಷು ಸೇವಾವಿಧಾಯಿನಂ ಭೋಗನಿರತಂ ಚ ॥

ತೃತೀಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಉತ್ತಮ ಬಂಧು-ಬಾಂಧವರು ಉಳ್ಳವನು, ರಾಜನ ಆಶ್ರಯದಲ್ಲಿ ಇರುತ್ತಾನೆ, ಬಂಧುಗಳ ಸೇವಾನಿರತನು ಮತ್ತು ಸುಖ-ಭೋಗನಿರತನು ಆಗುತ್ತಾನೆ.

**ಯವನಜಾತಕ**

**ಸಹಜಪೇ ಶುಭಲಾಭ ಪರಾಕ್ರಮಿೂ ಭವಗತ ಸುತಬಂಧುಭಿರನ್ವಿತಃ ।**
**ನೃಪತಿನಾಭಿಮತೋ ವಿಜಯೀ ನರೋ ಬಹುಲಭೋಗಯುತೋ ನಿಪುಣಃ ಸದಾ ॥**

ತೃತೀಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನಿಗೆ ಶುಭ ಮತ್ತು ಲಾಭ ಲಭಿಸುತ್ತದೆ, ಜಾತಕನು ಸಂತಾನ ಮತ್ತು ಬಂಧು-ಬಾಂಧವರೊಂದಿಗೆ ಕೂಡಿರುವವನು, ರಾಜನಿಂದ ಆದರಿಸಲ್ಪಟ್ಟವನು, ವಿಜಯಿಯು, ಅನೇಕ ಭೋಗದಿಂದ ಕೂಡಿರುವವನು ಮತ್ತು ಯಾವಾಗಲೂ ನಿಪುಣನು ಆಗಿರುತ್ತಾನೆ.

ಅನುಭವದಲ್ಲಿ - ತೃತೀಯೇಶನು ಶುಭಗ್ರಹನಾಗಿ ಲಾಭಭಾವದಲ್ಲಿ ಇದ್ದಾಗ ಜಾತಕನು ಸತತ ಪರಿಶ್ರಮ ಮತ್ತು ಚತುರತೆಯಿಂದ ವ್ಯಾಪಾರ-ವ್ಯವಹಾರದಿಂದ ಅಭಿವೃದ್ಧಿ ಹೊಂದುತ್ತಾನೆ, ಹಾಗೂ ಸುಖ-ಸಂಪತ್ತಿನಿಂದ ಕೂಡಿದವನಾಗಿ ಸಮಾಜದಲ್ಲಿ ಸ್ಥಾನ-ಮಾನ ಗಳಿಸುತ್ತಾನೆ. ಲಾಭಭಾವಸ್ಥಿತ ಶುಭಗ್ರಹರು (ಗುರು, ಶುಕ್ರ, ಬುಧ) ವಸುಮತೀಯೋಗ ನೀಡುತ್ತಾರೆ.

## ೩೬. ವ್ಯಯಭಾವಗತ ತೃತೀಯೇಶಫಲ

**ಪರಾಶರಹೋರಾ**

**ವ್ಯಯಸ್ಥೇ ಸಹಜಾಧೀಶೇ ಕುಕಾರ್ಯೇ ವ್ಯಯಕೃಜ್ಜನಃ ।**
**ಪಿತಾ ತಸ್ಯ ಭವೇತ್ ಕ್ರೂರಃ ಸ್ತ್ರೀಭಿರ್ಭಾಗ್ಯೋದಯಸ್ತಥಾ ॥**

ತೃತೀಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಕೆಟ್ಟಕಾರ್ಯಗಳಿಗೆ ಧನವ್ಯಯ ಮಾಡುತ್ತಾನೆ, ಆತನ ತಂದೆಯು ಕ್ರೂರಸ್ವಭಾವದವನು, ಸ್ತ್ರೀಯಿಂದ ಜಾತಕನ ಭಾಗ್ಯೋದಯ ಆಗುತ್ತದೆ.

**ಮಾನಸಾಗರೀ**

**ವ್ಯಯಗೇ ದುಶ್ಚಿಕ್ಯೇಶೇ ಮಿತ್ರ ವಿರೋಧೀ ಚ ಬಂಧುಸಂತಾಪೀ ।**
**ದೂರೇ ವಾಸಿತಬಂಧುರ್ವಿದೇಶಗಾಮಿೂ ನರೋ ಭವೇಜ್ಜಾತಃ ॥**

ತೃತೀಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಮಿತ್ರರ ವಿರೋಧಿಯು, ಬಂಧುಗಳಿಂದ ಸಂಕಷ್ಟಕ್ಕೀಡಾದವನು, ಬಂಧುಗಳಿಂದ ದೂರ ವಾಸಿಸುತ್ತಾನೆ ಮತ್ತು ವಿದೇಶಸಂಚಾರ ಮಾಡುತ್ತಾನೆ.

**ಯವನಜಾತಕ**

**ವ್ಯಯಗತೇ ಸಹಜೇ ವ್ಯಯವಾಂಛುಚಿರ್ನಿಜ ಸುಹೃದ್ರಿಪುರಲ್ಪ ಪರಾಕ್ರಮೀ ।**
**ಶುಭಸಮಾಗಮತೋಽಪಿ ಶುಭಂ ಭವೇತ್ಕಲಖಿಗ್ಗೆರ್ಜನನೀನ್ಯಪತೇರ್ಭಯಮ್ ॥**

ತೃತೀಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಖರ್ಚುಮಾಡುವವನು, ಪರಿಶುದ್ಧನು, ಆತನ ಮಿತ್ರರು ಆತನಿಗೆ ಶತ್ರುಗಳು ಆಗುತ್ತಾರೆ, ಜಾತಕನು ಅಲ್ಪಪರಾಕ್ರಮಿಯು, ಉತ್ತಮ ಜನರೊಂದಿಗೆ ಕೂಡಿರುವುದು ಶುಭಫಲದಾಯಕ ಆಗುತ್ತದೆ.

ಅನುಭವದಲ್ಲಿ - ತೃತೀಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಸಹೋದರರಿಂದ ಹಾನಿಗೀಡಾಗುತ್ತಾನೆ, ತೃತೀಯಾಧಿಪತಿಯು ಶುಭಗ್ರಹನಾದರೆ ಸದ್ವಿನಿಯೋಗ, ನೂತನ ಉದ್ಯಮದಲ್ಲಿ ಮೂಲಧನ, ಅಥವಾ ಭೂಮಿ ಖರೀದಿಸಿ ನೂತನ ಮನೆ ಕಟ್ಟಿಸುತ್ತಾನೆ, ತೃತೀಯಾಧಿಪತಿಯು ಪಾಪಗ್ರಹನಾದರೆ ಅನಾವಶ್ಯಕ ಖರ್ಚು ಅಥವಾ ದುಂದುವೆಚ್ಚದಿಂದ ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ. ಸಂಚಾರ ಉದ್ಯೋಗ ಅಥವಾ ಪರ ಊರಿನಲ್ಲಿ ವ್ಯಾಪಾರ-ವ್ಯವಹಾರದಿಂದ ಅಭಿವೃದ್ಧಿ ಹೊಂದುತ್ತಾನೆ.

# ಲಗ್ನಾಧಿಭಾವಗತ ಚತುರ್ಥೇಶ ಫಲ

## ೩.೭. ಲಗ್ನಭಾವಗತ ಚತುರ್ಥೇಶ ಫಲ

### ಪರಾಶರ ಹೋರಾ

ಸುಖೇಶೇ ಲಗ್ನಗೇ ಜಾತೋ ವಿದ್ಯಾಗುಣವಿಭೂಷಿತಃ ।
ಭೂಮಿ-ವಾಹನ ಸಂಯುಕ್ತೋ ಮಾತುಃ ಸುಖಸಮನ್ವಿತಃ ॥

ಚತುರ್ಥೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ವಿದ್ಯೆ ಮತ್ತು ಸದ್ಗುಣದಿಂದ ಅಲಂಕರಿಸಲ್ಪಟ್ಟವನು, ಭೂಮಿ ಮತ್ತು ವಾಹನದಿಂದ ಕೂಡಿದವನು, ತಾಯಿ ಮತ್ತು ಸುಖ ಉಳ್ಳವನು ಆಗುತ್ತಾನೆ.

### ಮಾನಸಾಗರೀ

ತುರ್ಯಪತಿರ್ಲಗ್ನಗತಃ ಪಿತೃಪುತ್ರಯೋಃ ಸ್ನೇಹಂ ಮಿಥಃ ಕುರುತೇ ।
ಉತ್ತಮೇ ಪಿತೃಪಕ್ಷೇ ವೈರೀ ಕಲಿತ ಪಿತೃನಾಮ್ನಾ ಪ್ರಸಿದ್ಧಂ ಚ ॥

ಚತುರ್ಥೇಶನುಲಗ್ನಭಾವದಲ್ಲಿ ಇದ್ದಾಗ ತಂದೆ-ಮಗನಲ್ಲಿ ಪರಸ್ಪರ ಸ್ನೇಹವು ಬೆಳೆಯುತ್ತದೆ, ಉತ್ತಮ ಕುಲದ, ತಂದೆಯ ಪಕ್ಷದವರೊಂದಿಗೆ ದ್ವೇಷಭಾವನೆ ಇರುತ್ತದೆ ಹಾಗೂ ತಂದೆಯ ಹೆಸರಿನಿಂದ ಪ್ರಸಿದ್ಧನು ಆಗುತ್ತಾನೆ.

### ಯವನಜಾತಕ

ಸುಖಪತೌ ಸುಖವಾಹನಭೋಗವಾಂಸ್ತನುಗತೇ ತನುತೇ ಧವಲಂ ಯಶಃ ।
ಜನಕ ಮಾತೃ ಸುಖೌಘಕರಂ ಪರಂ ಸುಭಗಲಾಭಯುತಂ ನಿರುಜಂ ವಪುಃ ॥

ಚತುರ್ಥೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನಿಗೆ ಸುಖ ಮತ್ತು ವಾಹನ ಲಭಿಸುತ್ತದೆ. ಭೋಗವಂತನು, ವಿಪುಲಯಶಸ್ಸು ಮತ್ತು ತಾಯಿ, ತಂದೆಯ ಸುಖ ಲಭಿಸುತ್ತದೆ, ಭಾಗ್ಯವಂತನು, ಲಾಭಕರನು ಮತ್ತು ರೋಗವಿಲ್ಲದ ದೇಹ ಉಳ್ಳವನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನಲ್ಲಿ ಸುಖ-ಸಂಪತ್ತಿನಲಾಲಸೆ ಇರುತ್ತದೆ, ವಾಹನ, ಭೂಮಿ ಪಡೆಯುತ್ತಾನೆ, ಕೈಕೊಂಡ

ಕಾರ್ಯಗಳಲ್ಲಿ ಯಶಸ್ಸು, ಹೆತ್ತವರ ಸುಖ ಉಳ್ಳವನು, ಆರೋಗ್ಯವಂತನು, ನೂತನ ಮನೆಯನ್ನು ಕಟ್ಟಿಸುತ್ತಾನೆ, ತನ್ನ ಸಂಬಂಧಿಕರಿಗೆ ಸಹಾಯಕನು ಆಗುತ್ತಾನೆ, ಚತುರ್ಥೇಶನು ಚತುರ್ಥ ಭಾವಸ್ಥಿತನಾದರೆ ಜಾತಕನು ಕುಲದೇವರ ಅನುಗ್ರಹದಿಂದ ಅಭಿವೃದ್ಧಿ ಹೊಂದುತ್ತಾನೆ.

## ೩೮. ಧನಭಾವಗತ ಚತುರ್ಥೇಶಫಲ

**ಪರಾಶರಹೋರಾ**

> **ಸುಖೇಶೇ ಧನಗೇ ಜಾತೋ ಭೋಗೀ ಸರ್ವಧನಾನ್ವಿತಃ ।**
> **ಕುಟುಂಬ ಸಹಿತೋ ಮಾನೀ ಸಾಹಸೀ ಕುಹಕಾನ್ವಿತಃ ॥**

ಚತುರ್ಥೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಎಲ್ಲವಿಧದ ಸಂಪತ್ತಿನ ಭೋಗವಂತನು, ಕುಟುಂಬ ಸಹಿತ ಮಾನವಂತನು, ಸಾಹಸಿಗನು ಆದರೆ ಕುಹಕತನ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

> **ಪಾತಾಲಪೆ ಧನಸ್ಥೇ ಕ್ರೂರಖಗೇ ಪಿತೃ ವಿರೋಧಕೃಚ್ಛುಭೇ ಜಾತಃ ।**
> **ಪಿತೃ ಪಾಲಕಃ ಪ್ರಸಿದ್ಧಃ ಪಿತಾ ಭುನಕ್ತ್ಯಾಹ ತಲ್ಲಕ್ಷ್ಮೀಮ್ ॥**

ಚತುರ್ಥೇಶನು ಕ್ರೂರಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯನ್ನು ವಿರೋಧಿಸುತ್ತಾನೆ, ಶುಭಗ್ರಹನಾದರೆ ತಂದೆಯ ಪಾಲನೆ ಮಾಡುವವನು, ಪ್ರಸಿದ್ಧನು ಮತ್ತು ಅವನ ಧನವನ್ನು ಅವನ ತಂದೆಯು ಕೂಡಾ ಅನುಭವಿಸುತ್ತಾನೆ.

**ಯವನಜಾತಕ:-**

> **ಸುಖಪತೌ ಧನಗೇ ಖಲಖೇಚರೈಃ ಪಿತೃವಿರೋಧಕರಃ ಕೃಪಣಃ ಶುಚಿಃ ।**
> **ಶುಭಖಗೈಃ ಪಿತೃಭಕ್ತಿಧನಾಶ್ರಯಃ ಶುಭಯುತಃ ಶ್ರುತಿಶಾಸ್ತ್ರವಿಶಾರದಃ ॥**

ಚತುರ್ಥೇಶನು ದ್ವಿತೀಯ ಭಾವದಲ್ಲಿ ಶುಭಗ್ರಹರೊಂದಿಗೆ ಇದ್ದಾಗ ಜಾತಕನು ತಂದೆಯ ಭಕ್ತನು, ಧನವಂತನು, ಶುಭಫಲದಿಂದ ಕೂಡಿದವನು, ಸಕಲ ಶಾಸ್ತ್ರಗಳಲ್ಲಿ ಪಂಡಿತನು ಆಗುತ್ತಾನೆ.

ಚತುರ್ಥೇಶನು ದ್ವಿತೀಯ ಭಾವದಲ್ಲಿ ಪಾಪಗ್ರಹರೊಂದಿಗೆ ಇದ್ದಾಗ ಜಾತಕನಿಗೆ ತನ್ನ ತಂದೆಯೊಂದಿಗೆ ವಿರೋಧತೆ ಇರುತ್ತದೆ, ಹಾಗೂ ಕೃಪಣನು ಮತ್ತು ಪರಿಶುದ್ಧನು ಆಗಿರುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ದ್ವಿತೀಯ ಭಾವದಲ್ಲಿ ಇದ್ದಾಗ ಜಾತಕನು ಭೂ ವ್ಯವಹಾರದಿಂದ ಧನ-ಸಂಪತ್ತನ್ನು ಗಳಿಸುತ್ತಾನೆ, ಚತುರ್ಥೇಶನು ಪಾಪಗ್ರಹನಾದರೆ ಜಾತಕನ ಮಾತಿನಲ್ಲಿ ತೀಕ್ಷ್ಣತೆ ಇರುತ್ತದೆ, ಭೂವಿವಾದದಿಂದ ಕುಟುಂಬ ಕಲಹ, ಕೋರ್ಟುವ್ಯವಹಾರ ಸಂಭವಿಸುತ್ತದೆ, ಚತುರ್ಥೇಶನು ಶುಭಗ್ರಹನಾದರೆ ಜಾತಕನು ವಿದ್ಯಾವಂತನು, ವಾಕ್‌ಚಾತುರ್ಯ ಉಳ್ಳವನು ಹಾಗೂ ಅಭಿವೃದ್ಧಿ ಹೊಂದಿ ಸ್ಥಾನ-ಮಾನದಿಂದ ಕೂಡಿದವನಾಗಿ ಸುಖಿವಂತನು ಆಗುತ್ತಾನೆ.

## ೩೯. ತೃತೀಯ ಭಾವಗತ ಚತುರ್ಥೇಶಫಲ

**ಪರಾಶರಹೋರಾ**

> ಸುಖೇಶೇ ಸಹಜೇ ಜಾತೋ ವಿಕ್ರಮೀ ಭೃತ್ಯಸಂಯುತಃ ।
> ಉದಾರೋऽರುಗ್ ಗುಣೀ ದಾತಾ ಸ್ವಭುಜಾರ್ಜಿತ ವಿತ್ತವಾನ್ ॥

ಚತುರ್ಥೇಶನು ತೃತೀಯ ಭಾವದಲ್ಲಿ ಇದ್ದಾಗ ಜಾತಕನು ಪರಾಕ್ರಮಿಯು, ಸೇವಕರಿಂದ ಕೂಡಿರುವವನು, ದಾನಿಯು, ರೋಗರಹಿತನು, ಗುಣವಂತನು, ಔದಾರ್ಯ ಉಳ್ಳವನು ಮತ್ತು ತನ್ನ ಬಾಹುಬಲದಿಂದ ಗಳಿಸಿದ ಧನಉಳ್ಳವನು ಆಗುತ್ತಾನೆ.

**ಮಾನಸಾಗರೀ**

> ತುರ್ಯೇಶೇ ಸಹಜಸ್ಥೇ ಪಿತೃವೇದನಾಕರಂ ಕುರುತೇ ।
> ಪಿತ್ರಾ ಸಹ ಕಲಹಕರಂ ಪಿತೃಬಾಂಧವಘಾತಕಂ ನಿಯತಮ್ ।

ಚತುರ್ಥೇಶನು ತೃತೀಯ ಭಾವದಲ್ಲಿ ಇದ್ದಾಗ ಜಾತಕನು ತಂದೆ-ತಾಯಿಗೆ ಕಷ್ಟದಾಯಕನು ನೋವನ್ನು ಉಂಟು ಮಾಡುತ್ತಾನೆ, ತಂದೆಯೊಂದಿಗೆ

ಕಲಹವನ್ನು ಮಾಡುತ್ತಾನೆ, ಹಾಗೂ ಯಾವಾಗಲೂ ತಂದೆ ಮತ್ತು ಸಹೋದರರಿಗೆ ಅಥವಾ ದಾಯಾದಿಗಳಿಗೆ ಘಾತಕನು ಆಗುತ್ತಾನೆ.

**ಯವನಜಾತಕ**

**ಸುಖಪತೌ ಸಹಜಾಲಯಗೇ ಕ್ಷಮಿೂ ಪಿತೃಸುಹೃಜ್ಜನನೀಕಲಿಕಾರಕಃ ।**
**ರಥಮಹೀವೃಷಭಾದಿಸುಖಾನ್ವಿತಃ ಶುಭಖಗೈರ್ಬಹುಮಿತ್ರಯುತೋ ನರಃ ॥**

ಚತುರ್ಥೇಶನು ತೃತೀಯ ಭಾವದಲ್ಲಿ ಇದ್ದಾಗ ಜಾತಕನು ಕ್ಷಮಾಗುಣಉಳ್ಳವನು, ತಂದೆಯೊಂದಿಗೆ ಮಿತ್ರತ್ವ, ತಾಯಿಯೊಂದಿಗೆ ಕಲಹ ಮಾಡುತ್ತಾನೆ, ರಥ, ಭೂಮಿ, ಎತ್ತು ಮೊದಲಾದವುಗಳಿಂದ ಸುಖವಂತನು, ಉತ್ತಮ ಗ್ರಹರಿದ್ದರೆ ಅನೇಕ ಮಿತ್ರರಿಂದ ಕೂಡಿದವನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ತೃತೀಯ ಭಾವದಲ್ಲಿ ಇದ್ದಾಗ ಜಾತಕನು ಪರಿಶ್ರಮದಿಂದ ದುಡಿದು, ದೀರ್ಘಕಾಲದ ನಂತರ ಭೂಮಿ-ಮನೆ ಪಡೆಯುತ್ತಾನೆ, ಚತುರ್ಥೇಶನು ಪಾಪಗ್ರಹನಾದರೆ ಸಹೋದರರಲ್ಲಿ ಪಿತ್ರಾರ್ಜಿತ ಸಂಪತ್ತಿನ ವಿವಾದ ಇರುತ್ತದೆ, ಜಾತಕನು ಹಲವಾರು ಸಮಸ್ಯೆಗಳನ್ನು ಎದುರಿಸಿ, ಪರಿಶ್ರಮದಿಂದ ದುಡಿದು ಅಭಿವೃದ್ಧಿ ಹೊಂದುತ್ತಾನೆ.

ಚತುರ್ಥೇಶನು ದೂಷಿತನಾದರೆ ಸಂಬಂಧಿಕರೊಂದಿಗೆ ವಿವಾದ ಹಾಗೂ ಕೋರ್ಟು ವ್ಯವಹಾರ ಸಂಭವಿಸಬಹುದು.

## ೪೦. ಚತುರ್ಥ ಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ಸುಖಭಾವಸ್ಥೇ ಮಂತ್ರೀ ಸರ್ವಧನಾನ್ವಿತಃ ।**
**ಚತುರಃ ಶೀಲವಾನ್ ಮಾನೀ ಜ್ಞಾನವಾನ್ ಸ್ತ್ರೀಪ್ರಿಯಃ ಸುಖೀ ॥**

ಚತುರ್ಥೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮಂತ್ರಿಯು ಮತ್ತು ಎಲ್ಲ ತರದ ಧನಉಳ್ಳವನು, ಚತುರನು, ಶೀಲವಂತನು, ಮಾನವಂತನು, ಜ್ಞಾನವಂತನು, ಸ್ತ್ರೀ (ಪತ್ನಿ) ಪ್ರಿಯನು ಮತ್ತು ಸುಖವಂತನು ಆಗುತ್ತಾನೆ.

ತುರ್ಯಗತೇ ತುರ್ಯಪತೌ ಪಿತರಿ ಕ್ಷಿತಿಪಾತ್ತ ಪ್ರಚುರಮಾನಃ ।
ವಿದಿತಃ ಪಿತೃಲಾಭಕರೋ ಭವತಿ ಸುಧರ್ಮಾ ಸುಖೀ ಧನಪಃ ॥

ಚತುರ್ಥೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನ ತಂದೆಯು ರಾಜನಿಂದ ಸನ್ಮಾನಿಸಲ್ಪಡುತ್ತಾನೆ, ಜಾತಕನು ಸ್ವತಹ ಪ್ರಸಿದ್ಧನು, ತಂದೆಗೆ ಲಾಭದಾಯಕನು, ಉತ್ತಮ ರೀತಿಯಲ್ಲಿ ಧರ್ಮಾಚರಣೆ ಮಾಡುವವನು, ಸುಖವಂತನು ಮತ್ತು ಧನವಂತನು ಆಗುತ್ತಾನೆ.

ಯವನಜಾತಕ

ಸುಖಪತೌ ಸುಖಗೇ ಸುಖಸನ್ನಿಧೌ ನೃಪಸಮೋ ಧನವಾನ್ ಬಹುಸೇವಕಃ ।
ಪಿತೃಸುಖಂ ಬಹುಲಂ ಜನಮಾನ್ಯತಾ ರಥಗಜಾಶ್ವಶುಭೈಃ ಸುಖಭಾಙ್ನರಃ ॥

ಚತುರ್ಥೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ರಾಜನಂತೆ ಧನವಂತನು, ಅನೇಕ ಸೇವಕರು ಮತ್ತು ಪಿತೃಸುಖ ಉಳ್ಳವನು, ತುಂಬಾ ಜನರಿಂದ ಮಾನಿಸಲ್ಪಡುತ್ತಾನೆ. ರಥ, ಆನೆ, ಕುದುರೆ ಸವಾರಿ ಮಾಡುತ್ತಾನೆ ಹಾಗೂ ಸುಖವಂತನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ಚತುರ್ಥದಲ್ಲಿ ಇದ್ದಾಗ ಜಾತಕನು ಪಿತ್ರಾರ್ಜಿತ ಧನ-ಸಂಪತ್ತು, ಭೂಮಿ ಪಡೆಯುತ್ತಾನೆ, ಸುಖವಂತನು, ಕೀರ್ತಿವಂತನು ಆಗುತ್ತಾನೆ, ಚತುರ್ಥೇಶನು ಪಾಪಗ್ರಹನಾದರೆ ಜಾತಕನು ಚತುರತೆ ಮತ್ತು ಅಲ್ಪವಂಚನೆಯಿಂದ ಧನ-ಸಂಪತ್ತನ್ನು ಗಳಿಸುತ್ತಾನೆ, ಭೂವಿವಾದ, ಗೃಹದಲ್ಲಿ ಅಶಾಂತಿ, ವ್ಯಾಪಾರ-ವ್ಯವಹಾರದಲ್ಲಿ ಏರಿಳಿತ ಸಂಭವಿಸುತ್ತದೆ, ಚತುರ್ಥಾಧಿಪತಿಯ ದಶಾ-ಭುಕ್ತಿಯಲ್ಲಿ ಜಾತಕನ ತಂದೆಯು ಅನಾರೋಗ್ಯದಿಂದ ಪೀಡಿತನು ಆಗುತ್ತಾನೆ ಅಥವಾ ಅವಸಾನ ಸಂಭವಿಸಬಹುದು, ಚತುರ್ಥೇಶನು ಶುಭಗ್ರಹನಾದರೆ ಜಾತಕನು ಸ್ವಾರ್ಜಿತವಿತ್ತದಿಂದ ನೂತನಗೃಹ, ಭೂಮಿ ಅಥವಾ ತೋಟ ಪಡೆಯುತ್ತಾನೆ, ಹಾಗೂ ಸುಖವಂತನು ಆಗುತ್ತಾನೆ, ಶುಭ ಸಮಾರಂಭಗಳನ್ನು ನೆರವೇರಿಸುತ್ತಾನೆ. ಮಾತೃಸುಖ ಉಳ್ಳವನು ಮತ್ತು ತಾಯಿಯನ್ನು ಪ್ರೀತಿಯಿಂದ ಸಾಕುತ್ತಾನೆ, ತಾಯಿಯ ಮಾತಿನಂತೆ ನಡೆಯುತ್ತಾನೆ.

# ೪೧. ಪಂಚಮ ಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ಪುತ್ರಭಾವಸ್ಥೇ ಸುಖೀ ಸರ್ವಜನಪ್ರಿಯಃ ।**
**ವಿಷ್ಣುಭಕ್ತೋ ಗುಣೀ ಮಾನೀ ಸ್ವಭುಜಾರ್ಜಿತ ವಿತ್ತವಾನ್ ॥**

ಚತುರ್ಥೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಸುಖವಂತನು, ಸರ್ವ ಜನಪ್ರಿಯನು, ವಿಷ್ಣುಭಕ್ತನು, ಗುಣವಂತನು, ಮಾನವಂತನು ಮತ್ತು ತನ್ನ ಬಾಹುಬಲದಿಂದ ಗಳಿಸಿದ ಧನ-ಸಂಪತ್ತು ಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಸುತಗೇ ತುರ್ಯಗೃಹೇಶೇ ಪಿತೃಸಂಲಾಭವಾಂಶ್ಚ ದೀರ್ಘಾಯುಃ ।**
**ಭವತಿ ಕೃತಿಪ್ರಸಿದ್ಧಃ ಸಸುತಃ ಸುತಪಾಲಕಶ್ಚೈವ ॥**

ಚತುರ್ಥೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ತನ್ನ ತಂದೆಯಿಂದ ಲಾಭ ಆಗುತ್ತದೆ, ದೀರ್ಘಾಯು, ತಾನು ಮಾಡುವ ಕಾರ್ಯಗಳಿಂದ ಪ್ರಸಿದ್ಧನು ಆಗುತ್ತಾನೆ, ಪುತ್ರವಂತನು ಹಾಗೂ ಮಕ್ಕಳ ಪಾಲನೆಯನ್ನು ಮಾಡುತ್ತಾನೆ.

**ಯವನಜಾತಕ**

**ಸುಖಪತೌ ಬಹುಜೀವಿತವಾನ್ನರಃ ಸುತಗತೇ ಸುತಯುಕ್ತಸುಧೀರ್ನರಃ ।**
**ಶುಭವಶಾತ್ಸುಖಭೋಗ ಧನಾನ್ವಿತಃ ಶ್ರುತಿಧರೋಽತಿಪವಿತ್ರ ವಿಲೇಖಕಃ ॥**

ಚತುರ್ಥೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುವು, ಪುತ್ರವಂತನು, ಬುದ್ಧಿವಂತನು ಆಗುತ್ತಾನೆ. ಚತುರ್ಥೇಶನು ಶುಭಗ್ರಹನಾದರೆ ಸುಖ-ಭೋಗ ಮತ್ತು ಧನ ಉಳ್ಳವನು, ಅತಿ ಪವಿತ್ರವಾದ ವೇದಗಳ ಸಾರವನ್ನು ಬರೆಯುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಸದ್ಗುಣವಂತನು, ಕುಲದೇವರ ಆರಾಧನೆಯಿಂದ ಸುಖವಂತನು,

ಸಮಾಜದಲ್ಲಿ ಪ್ರಿಯನು ಹಾಗೂ ಗಣ್ಯವ್ಯಕ್ತಿಯು ಆಗುತ್ತಾನೆ, ಅಭಿಮಾನ ಉಳ್ಳವನು, ಸ್ವಪ್ರಯತ್ನದಿಂದ ಅಭಿವೃದ್ಧಿ ಹೊಂದುತ್ತಾನೆ.

ಪಂಚಮಾಧಿಪತಿಯು ಪಾಪಗ್ರಹನಾದರೆ ಜಾತಕನಲ್ಲಿ ಕ್ರೋಧ, ಪರತನ, ತನ್ನವಾದವನ್ನೇ ಸಮರ್ಥಿಸುವ ಛಲಸ್ವಭಾವ ಮತ್ತು ಸಂತತಿದೋಷ ಇರುತ್ತದೆ.

## ೪೨. ಷಷ್ಠಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ರಿಪುಭಾವಸ್ಥೇ ಮಾತುಃ ಸುಖವಿವರ್ಜಿತಃ ।**
**ಕ್ರೋಧೀ ಚೋರೋಽಭಿಚಾರೀ ಚ ಸ್ವೇಚ್ಛಾಚಾರಶ್ಚ ದುರ್ಮನಾಃ ॥**

ಚತುರ್ಥೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ತಾಯಿಯ ಸುಖವನ್ನು ಕಳಕೊಂಡವನು, ಕೋಪಿಷ್ಠನು, ಕಳ್ಳನು, ಅಭಿಚಾರ ಮಾಡುವವನು ಹಾಗೂ ಸ್ವೇಚ್ಛಾಚಾರ ಉಳ್ಳವನು ಮತ್ತು ಕೆಟ್ಟಮನಸ್ಸಿನವನು ಆಗುತ್ತಾನೆ.

**ಮಾನಸಾಗರೀ**

**ಹಿಬುಕಪತೌ ರಿಪುಸಂಸ್ಥೇ ಮಾತ್ರರ್ಥ ವಿನಾಶಕಃ ಶಿಶುರ್ಜಾತಃ ।**
**ಪಿತೃದೋಷರತಃ ಕ್ರೂರೇ ಸೌಮ್ಯೇ ಧನಸಂಚಯೋ ತನಯಃ ॥**

ಚತುರ್ಥೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ತನ್ನ ತಾಯಿಯ ಧನವನ್ನು ನಾಶಮಾಡುತ್ತಾನೆ ಮತ್ತು ತನ್ನ ತಂದೆಯ ದೋಷ ಶೋಧನೆ ಮಾಡುವುದರಲ್ಲಿ ನಿರತನು ಆಗುತ್ತಾನೆ, ಚತುರ್ಥಾಧಿಪತಿಯು ಶುಭಗ್ರಹನಾಗಿ ಷಷ್ಠಭಾವದಲ್ಲಿ ಇದ್ದರೆ ಜಾತಕನು ಧನಸಂಗ್ರಹ ಮಾಡುತ್ತಾನೆ.

**ಯವನಜಾತಕ**

**ಭವತಿ ಮಾತೃಪತೌ ರಿಪುಗೇ ನರೋ ರಿಪುಯುತೋಽಪಿ ಅನರ್ಥವಿನಾಶಕಃ ।**
**ಖಲಖಗೋಽಪಿ ಕಲಂಕಿತ ಮಾತುರೋ ಭವತಿ ಸೌಮ್ಯಖಗೈರ್ಧನ ಸಂಚಯೀ ॥**

ಚತುರ್ಥೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಶತ್ರುಗಳಿದ್ದರೂ ಅವರಿಂದ ಉಂಟಾಗುವ ಅನರ್ಥವನ್ನು ನಾಶಮಾಡುತ್ತಾನೆ, ಚತುರ್ಥೇಶನು

ಕ್ರೂರ ಗ್ರಹರಿಂದ ಕೂಡಿದ್ದರೆ ಸೋದರಮಾವನಿಂದ ಕೆಟ್ಟ ಹೆಸರು ಬರುತ್ತದೆ, ಶುಭಗ್ರಹನಾದರೆ ಧನ ಸಂಗ್ರಹ ಆಗುತ್ತದೆ.

ಅನುಭವದಲ್ಲಿ - ಚತುರ್ಥೇಶನು ಷಷ್ಠಭಾವಗತನಾದಾಗ ಜಾತಕನಿಗೆ ಸುಖದ ಅಭಾವ, ತಾಯಿಯೊಂದಿಗೆ ಬೇಧಾಭಿಪ್ರಾಯ ಅಥವಾ ಕಲಹ ಇರುತ್ತದೆ, ಜಾತಕನು ಕೋಪಿಷ್ಠನು, ಅಭಿಮಾನ ಉಳ್ಳವನು, ವಿಷಯಾಭಿಲಾಷಿಯು ಆಗುತ್ತಾನೆ.

ಚತುರ್ಥೇಶನು ಶುಭಗ್ರಹನಾದರೆ ಜಾತಕನು ವಟ್ಟ, ದಲಾಲಿ ಕೆಲಸದಿಂದ ಧನಗಳಿಸುತ್ತಾನೆ, ಚತುರ್ಥೇಶನು ಪಾಪಗ್ರಹನಾದರೆ ಮಾತೃಸುಖದ ನಾಶ, ಸಂಭಂಧಿಕರೊಂದಿಗೆ ಭೂವಿವಾದದಿಂದ ಕಲಹ ತಾಯಿಯು ಅನಾರೋಗ್ಯ ಪೀಡಿತಳು ಮತ್ತು ವ್ಯಾಪಾರ-ವ್ಯವಹಾರದಲ್ಲಿ ಹಾನಿ ಸಂಭವಿಸುತ್ತದೆ.

## ೪೩. ಸಪ್ತಮ ಭಾವಗತ ಚತುರ್ಥೇಶಫಲ

**ಪರಾಶರಹೋರಾ**

ಸುಖೇಶೇ ಸಪ್ತಮೇ ಜಾತೋ ಬಹುವಿದ್ಯಾಸಮನ್ವಿತಃ ।
ಪಿತ್ರಾರ್ಜಿತ ಧನತ್ಯಾಗೀ ಸಭಾಯಾಂ ಮೂಕವದ್ ಭವೇತ್ ॥

ಚತುರ್ಥೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಅನೇಕ ವಿದ್ಯೆಗಳನ್ನು ತಿಳಿದವನು, ಪಿತ್ರಾರ್ಜಿತ ಧನವನ್ನು ತ್ಯಾಗ ಮಾಡಿದವನು ಮತ್ತು ಸಭೆಯಲ್ಲಿ ಮಾತಾಡದೆ ಮೂಕನಂತೆ ಇರುತ್ತಾನೆ.

**ಮಾನಸಾಗರೀ**

ಅಂಬುಪತೌ ಸಪ್ತಮಗೇ ಕ್ರೂರೇ ಶ್ವಶುರಂ ಸ್ನುಷಾ ನ ಪಾಲಯತಿ ।
ಸೌಮ್ಯೇ ಪಾಲಯತಿ ಪುನಃ ಕುಲವತೋ ಕುಜಕವೀ ಕುರುತಃ ॥

ಚತುರ್ಥೇಶನು ಕ್ರೂರಗ್ರಹನಾಗಿ ಸಪ್ತಮಭಾವದಲ್ಲಿ ಇದ್ದರೆ ಜಾತಕನ ಪತ್ನಿಯು ತನ್ನ ಮಾವನ ಪಾಲನೆ, ಸೇವೆ ಮಾಡುತ್ತಾಳೆ. ಚತುರ್ಥಾಧಿಪತಿ ಕುಜ ಅಥವಾ ಶುಕ್ರನಾದರೆ ಜಾತಕನ ಪತ್ನಿಯು ಕುಲೀನ (ಶ್ರೇಷ್ಠಳು) ಆಗಿರುತ್ತಾಳೆ.

ಯವನಜಾತಕ

ಮದನಗೇಽಂಬುಪತೌ ಚ ಸುರಾಕೃತಿರ್ಧನಯುತೋ ಯುವತೀಜನವಲ್ಲಭಃ ।
ಸ್ಮರಯುತಃ ಸುಭಗಃ ಶುಭಖೇಚರೈಃ ಖಲಖಗೇಽತಿಖಲಃ ಕಠಿನಃ ಪುಮಾನ್ ॥

ಚತುರ್ಥೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ದೇವ ತುಲ್ಯ ಆಕೃತಿ ಉಳ್ಳವನು, ಧನವಂತನು, ಸ್ತ್ರೀಯರ ಪ್ರಿಯನು ಆಗುತ್ತಾನೆ.

ಸಪ್ತಮಭಾವಸ್ಥಿತ ಚತುರ್ಥೇಶನು ಶುಭಗ್ರಹನಾದರೆ ಜಾತಕನು ಕಾಮಯುತನು ಮತ್ತು ಭಾಗ್ಯವಂತನು ಆಗುತ್ತಾನೆ.

ಸಪ್ತಮಭಾವಸ್ಥಿತ ಚತುರ್ಥೇಶನು ಪಾಪಗ್ರಹನಾದರೆ ಜಾತಕನು ದುಷ್ಟನು, ಕ್ರೂರ ಸ್ವಭಾವದವನು ಮತ್ತು ದಯೆ ಇಲ್ಲದವನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಆಕರ್ಷಕ ವ್ಯಕ್ತಿತ್ವದವನು, ಹಲವಾರು ವಿದ್ಯೆಗಳನ್ನು ಬಲ್ಲವನು, ಪಿತ್ರಾರ್ಜಿತ ಸಂಪತ್ತು ಲಭಿಸುವುದಿಲ್ಲ ಅಥವಾ ತ್ಯಜಿಸುತ್ತಾನೆ, ಕೃಷಿ-ಬೇಸಾಯ ಮಾಡುತ್ತಾನೆ, ಸ್ತ್ರೀಯರ ಪ್ರಿಯನು ಆಗುತ್ತಾನೆ, ಚತುರ್ಥೇಶನು ಶುಭಗ್ರಹನಾದರೆ ಉದಾರತೆ ಉಳ್ಳವನು, ಕಾಮುಕನು. ಚತುರ್ಥೇಶನು ಪಾಪಗ್ರಹನಾದರೆ ಕಠೋರತೆ ಮತ್ತು ದುಷ್ಟತೆ ಇರುತ್ತದೆ.

## ೪೪. ಅಷ್ಟಮ ಭಾವಗತ ಚತುರ್ಥೇಶಫಲ

ಪರಾಶರಹೋರಾ

ಸುಖೇಶೇ ರಂಧ್ರಭಾವಸ್ಥೇ ಗೃಹಾದಿಸುಖವರ್ಜಿತಃ ।
ಪಿತ್ರೋ ಸುಖಂ ಭವೇದಲ್ಪಂ ಜಾತಃ ಕ್ಲೀಬಸಮೋ ಭವೇತ್ ॥

ಚತುರ್ಥೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಗೃಹಾದಿ ಸುಖ ಬಿಡಲ್ಪಟ್ಟವನು, ಪಿತೃ ಸುಖವು ಅಲ್ಪಲಭಿಸುತ್ತದೆ ಮತ್ತು ನಪುಂಸಕ ಸಮಾನನು ಆಗುತ್ತಾನೆ.

ಮಾನಸಾಗರೀ

ಛಿದ್ರಗತಸ್ತುರ್ಯಪತಿಃ ಕ್ರೂರಂ ರೋಗಾನ್ವಿತಂ ದರಿದ್ರಂ ವಾ ।
ದುಷ್ಕರ್ಮಕರಂ ಮೃತ್ಯು ಪ್ರಿಯಮಥವಾ ಮಾನವಂ ಕುರುತೇ ॥

ಚತುರ್ಥೇಶನು ಕ್ರೂರಗ್ರಹನಾಗಿ ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ರೋಗದಿಂದ ಕೂಡಿದವನು ಅಥವಾ ದರಿದ್ರನು ಆಗುತ್ತಾನೆ, ದುಷ್ಕರ್ಮ (ಕೆಟ್ಟಕೆಲಸ) ಮಾಡುವವನು ಅಥವಾ ಮರಣದ ಅಭಿಲಾಷೆ ಉಳ್ಳವನು ಆಗುತ್ತಾನ.

**ಯವನಜಾತಕ**

**ಮೃತಿಗತೇ ಸರುಜೋಽಂಬುಪತೌ ನರಃ ಸುಖಿಯುತಃ ಪಿತೃಮಾತೃಸುಖಾಲ್ಪಕಃ ।**
**ಭವತಿ ವಾಹನನಾಶಕರಃ ಶುಭೇ ಖಲಖಗೇಽತಿ ಸಮಾಗಮನಾಶಕಃ ॥**

ಚತುರ್ಥೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ನೋವು-ಪೀಡೆ ಉಳ್ಳವನು, ಸುಖವಂತನು ತಂದೆ-ತಾಯಿಯಿಂದ ಅಲ್ಪಸುಖ ಪಡೆಯುತ್ತಾನೆ, ಸುಖೇಶನು ಶುಭಗ್ರಹರಿಂದ ಕೂಡಿದ್ದರೆ ವಾಹನನಾಶ ಆಗುತ್ತದೆ, ಕ್ರೂರ ಗ್ರಹರಿಂದ ಕೂಡಿದ್ದರೆ ಸಮಾಗಮ (ಒಟ್ಟುಗೂಡುವುದು) ಆಗುವುದಿಲ್ಲ.

ಅನುಭವದಲ್ಲಿ - ಚತುರ್ಥೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ನೂತನ ಗೃಹ ಕಟ್ಟಿಸಿ ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ, ಹಾಗೂ ಸುಖಹೀನನು ಆಗುತ್ತಾನೆ. ಚತುರ್ಥೇಶನು ಪಾಪಗ್ರಹನಾದರೆ ಜಾತಕನು ಭೂವಿವಾದ, ಗ್ರಹದಲ್ಲಿ ಅಶಾಂತಿ ಮತ್ತು ಸಾಲದಿಂದ ಪೀಡಿಸಲ್ಪಟ್ಟು ಜನ್ಮಸ್ಥಳ ತ್ಯಜಿಸಿ ಪರಊರಿನಲ್ಲಿ ವ್ಯಾಪಾರ-ವ್ಯವಹಾರದಿಂದ ಅಭಿವೃದ್ಧಿ ಹೊಂದುತ್ತಾನೆ.

## ೪೫. ನವಮ ಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ಭಾಗ್ಯಭಾವಸ್ಥೇ ಜಾತಃ ಸರ್ವಜನಪ್ರಿಯಃ ।**
**ದೇವಭಕ್ತೋ ಗುಣೀ ಮಾನೀ ಭವೇತ್ ಸರ್ವಸುಖಾನ್ವಿತಃ ॥**

ಚತುರ್ಥೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಎಲ್ಲ ಜನರಿಗೆ ಪ್ರಿಯನಾದವನು, ದೇವಭಕ್ತನು, ಉತ್ತಮಗುಣವಂತನು, ಮಾನವಂತನು ಮತ್ತು ಸಕಲಸುಖ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಸುಕೃತೇ ತುರ್ಯಪತೌ ಪಿತರ್ಯಸಂಗೀ ಸಮಸ್ತವಿದ್ಯಾವಾನ್ ।**
**ಪಿತೃಧರ್ಮಸಂಗ್ರಹಪರ: ಪಿತೃನಿರಪೇಕ್ಷೋ ಭವೇನ್ಮನುಜಃ ॥**

ಚತುರ್ಥೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯ ಒಟ್ಟಿಗೆಕೂಡಿ ಇರುವುದಿಲ್ಲ, ಸಕಲ ವಿದ್ಯೆಗಳನ್ನು ಬಲ್ಲವನು, ತಂದೆಯ ಧರ್ಮಾಚರಣೆಯನ್ನು ಅನುಸರಿಸುವವನು ತಂದೆಯಿಂದ ಯಾವವಿಧದ ಅಪೇಕ್ಷೆ ಇಲ್ಲದವನು ಆಗುತ್ತಾನೆ.

**ಯವನಜಾತಕ**

**ನವಮಗೇ ಸುಖಪೇ ಬಹುಭಾಗ್ಯವಾನ್ಪಿತೃಧನಾರ್ಥಸುಹೃನ್ಮನುಜಾಧಿಪಃ ।**
**ಭವತಿ ತೀರ್ಥಕರೋ ವ್ರತವಾನ್ನಮೀ ಸುನಯನಃ ಪರದೇಶಸುಖೀ ನರಃ ॥**

ಚತುರ್ಥೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತುಂಬಾ ಭಾಗ್ಯವಂತನು, ತಂದೆಯ ಧನದಿಂದ ಸಂತೋಷಪಟ್ಟವನು, ಮಿತ್ರರು ಮತ್ತು ಜನರ ನಾಯಕನು ಆಗುತ್ತಾನೆ, ತೀರ್ಥ ಮತ್ತು ವ್ರತ ಮಾಡುತ್ತಾನೆ, ಕ್ಷಮಾಗುಣದವನು, ಸುಂದರವಾದ ಕಣ್ಣುಗಳು ಉಳ್ಳವನು ಮತ್ತು ಪರದೇಶದಲ್ಲಿ ಸುಖವಂತನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ನವಮಭಾವದಲ್ಲಿ ಇದ್ದರೆ ಜಾತಕನಿಗೆ ರಾಜಯೋಗ ದಾಯಕನು ಆಗುತ್ತಾನೆ, ಜಾತಕನು ವಿದ್ಯಾವಂತನು, ಜನರಿಗೆ ಪ್ರಿಯನಾದವನು, ಗುರು-ದೇವರ ಸೇವೆ ಮಾಡುವವನು, ಗುಣವಂತನು, ಭಾಗ್ಯಶಾಲಿಯು ಆಗುತ್ತಾನೆ, ಚತುರತೆಯಿಂದ ವ್ಯಾಪಾರ-ವ್ಯವಹಾರ ನಿರ್ವಹಿಸಿ ಧನ ಸಂಪತ್ತನ್ನು ಗಳಿಸುತ್ತಾನೆ, ಹೆತ್ತವರ ಸುಖ ಉಳ್ಳವನು, ಸಂಭಂಧಿಕರ ಏಳಿಗೆಗೆ ಸಹಾಯಕನು ಆಗುತ್ತಾನೆ, ಸಮಾಜ ಸೇವಕನಾಗಿ ಕೀರ್ತಿವಂತನು ಆಗುತ್ತಾನೆ. ಸಾಮಾಜಿಕ ಅಥವಾ ಧಾರ್ಮಿಕ ಸಂಸ್ಥೆಯ ಆಡಳಿತಗಾರನು ಆಗುತ್ತಾನೆ.

## ೪೬. ದಶಮಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ಕರ್ಮಭಾವಸ್ಥೇ ರಾಜಮಾನ್ಯೋ ನರೋ ಭವೇತ್ ।**
**ರಸಾಯನೀ ಮಹಾಹೃಷ್ಟೋ ಸುಖಭೋಗೀ ಜಿತೇಂದ್ರಿಯಃ ॥**

ಚತುರ್ಥೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಗೌರವಿಸಲ್ಪಟ್ಟವನು, ರಸಾಯನ ಶಾಸ್ತ್ರಜ್ಞನು, ಅತಿಸಂತುಷ್ಟನು, ಸುಖವಂತನು, ಭೋಗವಂತನು ಮತ್ತು ಜಿತೇಂದ್ರಿಯನು ಆಗುತ್ತಾನೆ.

ಮಾನಸಾಗರೀ

ಪಾತಾಲಪೇಽಂಬರಗತೇ ಪಾಪೇ ಸುತಮಾತರಂ ತ್ಯಜೇಜ್ಜನಕಃ ।
ಸೃಜತೇ ತ್ವನ್ಯಾಂ ದಯಿತಾಂ ಸೌಮ್ಯೇ ಪುನರನ್ಯಸೇವಕಃ ಪುರುಷಃ ॥

ಚತುರ್ಥೇಶನು ದಶಮಭಾವದಲ್ಲಿ ಇದ್ದಾಗ ಜಾತಕನ ತಂದೆಯು ತನ್ನ ಪತ್ನಿಯನ್ನು (ಜಾತಕನ ತಾಯಿಯನ್ನು) ಪರಿತ್ಯಾಗ ಮಾಡುತ್ತಾನೆ ಮತ್ತು ಅನ್ಯಸ್ತ್ರೀಯೊಂದಿಗೆ ಸಂಬಂಧ ಜೋಡಿಸುತ್ತಾನೆ. ದಶಮ ಭಾವಸ್ಥಿತ ಚತುರ್ಥಾಧಿಪತಿಯು ಶುಭಗ್ರಹನಾದರೆ ಅನ್ಯಸ್ತ್ರೀಯ ಸಂಬಂಧ ಇರುತ್ತದೆ ಆದರೆ ಪತ್ನಿಯನ್ನು ಪರಿತ್ಯಾಗ ಮಾಡುವುದಿಲ್ಲ.

ಯವನಜಾತಕ

ಗಗನಗೇ ಸುಖಪೇ ಗೃಹಗೇಸುಖಿ ಜನಕಮಾತೃಕರೋ ಧನಭುಕ್ಕ್ಷಮಿ ।
ಸುನಯನಃ ಪರತೋ ನೃಪಸಂಮತಃ ಖಲಖಗೈರ್ವಿಪರೀತಫಲಂ ವದೇತ್ ॥

ಚತುರ್ಥೇಶನು ದಶಮಭಾವದಲ್ಲಿ ಇದ್ದಾಗ ಜಾತಕನಿಗೆ ಪತ್ನೀ ಸುಖ, ತಾಯಿ-ತಂದೆಯಿಂದ ಧನ-ಸಂಪತ್ತು ಲಭಿಸುತ್ತದೆ, ಕ್ಷಮಾಗುಣ, ಸುಂದರವಾದ ಕಣ್ಣುಗಳು ಮತ್ತು ರಾಜನಿಂದ ಸನ್ಮಾನಿತನು ಆಗುತ್ತಾನೆ, ಚತುರ್ಥಾಧಿಪನು ಕ್ರೂರಗ್ರಹನಾದರೆ ವಿಪರೀತಫಲ ಸಂಭವಿಸುತ್ತದೆ.

ಅನುಭವದಲ್ಲಿ - ಚತುರ್ಥೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಗೌರವಾನ್ವಿತನು, ಹಿರಿಯರ ಸಂಪತ್ತನ್ನು ಪಡೆಯುತ್ತಾನೆ, ಹಾಗೂ ಸಂತೋಷದಿಂದ ಇರುತ್ತಾನೆ, ಕ್ಷಮಾಗುಣ, ಮಾತೃಸುಖ ಉಳ್ಳವನು ಮತ್ತು ಧಾರ್ಮಿಕತೆಯಲ್ಲಿ ಪ್ರೀತಿ ಇರುತ್ತದೆ. ಸಂಘ-ಸಂಸ್ಥೆಗಳ ಅಥವಾ ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿಗೆ ದುಡಿದು ಕೀರ್ತಿವಂತನು ಆಗುತ್ತಾನೆ.

## ೪೭. ಏಕಾದಶಭಾವಗತ ಚತುರ್ಥೇಶಫಲ

ಪರಾಶರಹೋರಾ

ಸುಖೇಶೇ ಲಾಭಗೇ ಜಾತೋ ಗುಪ್ತರೋಗಭಯಾನ್ವಿತಃ ।
ಉದಾರೋ ಗುಣವಾನ್ ದಾತಾ ಪರೋಪಕರಣೇ ರತಃ ॥

ಚತುರ್ಥೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಗುಪ್ತರೋಗಪೀಡಿತನು, ಖ್ಯಾತವಂತನು, ಗುಣವಂತನು, ದಾನಿ ಮತ್ತು ಪರೋಪಕಾರ ತಲ್ಲೀನನು ಆಗುತ್ತಾನೆ.

**ಮಾನಸಾಗರೀ**

**ಏಕಾದಶೇ ತುರ್ಯಪತೌ ಧರ್ಮೀ ಪಿತೃಪಾಲಕಃ ಸುಕರ್ಮಾ ಚ ।**
**ಪಿತೃಭಕ್ತೋ ಭವತಿ ಪುನಃ ಪ್ರಚುರಾಯುರ್ವ್ಯಾಧಿರಹಿತಶ್ಚ ॥**

ಚತುರ್ಥೇಶನು ಏಕಾದಶ ಭಾವದಲ್ಲಿ ಇದ್ದಾಗ ಜಾತಕನು ದಾನ ಮತ್ತು ಧಾರ್ಮಿಕ ಆಚರಣೆ ಮಾಡುವವನು, ತಂದೆಯ ಆಜ್ಞೆಯಂತೆ ನಡೆಯುವವನು, ಸತ್ಕರ್ಮ ಮಾಡುವವನು, ತಂದೆಯ ಭಕ್ತನು, ದೀರ್ಘಾಯು ಮತ್ತು ರೋಗರಹಿತನು ಆಗುತ್ತಾನೆ.

**ಯವನಜಾತಕ**

**ಭವಗತೇಂದುಪತೌ ಪಿತೃಪಾಲಕೋ ವಿವಿಧಲಬ್ಧಿಯುತಃ ಶುಭಕೃತ್ಸದಾ ।**
**ಪಿತರಿ ಮಾತರಿ ಭಕ್ತಿಯುತೋ ನರಃ ಪ್ರಚುರ ಜೀವಿತರೋಗವಿವರ್ಜಿತಃ ॥**

ಚತುರ್ಥೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯ ಪಾಲಕನು, ವಿವಿಧ ತರದಲ್ಲಿ ಧನಪ್ರಾಪ್ತಿ, ಯಾವಾಗಲೂ ಸುಖವಂತನು, ತಂದೆ-ತಾಯಿಯಲ್ಲಿ ಭಕ್ತಿ ಉಳ್ಳವನು, ದೀರ್ಘಕಾಲ ಜೀವಿಸುವವನು ಮತ್ತು ರೋಗರಹಿತನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಕುಲದೇವರ ಆರಾಧಕನು, ಸತ್ಕರ್ಮ ಮಾಡುತ್ತಾನೆ, ಆರೋಗ್ಯವಂತನು, ಪರಿಶ್ರಮದಿಂದ ದುಡಿದು, ಸ್ವಾರ್ಜಿತ ವಿತ್ತದಿಂದ ಭೂಮಿ, ಗೃಹಾದಿ ಪಡೆಯುತ್ತಾನೆ, ಕೆಲವುಕಾಲ ವಿದೇಶದಲ್ಲಿ ಇದ್ದು ಧನ ಸಂಪಾದಿಸುವ ಯೋಗ ಇರುತ್ತದೆ. ಚತುರ್ಥಾಧಿಪತಿಯು ಪಾಪಗ್ರಹನಾದರೆ ಸಹೋದರರೊಂದಿಗೆ ಬೇಧಾಭಿಪ್ರಾಯ ಅಥವಾ ಸಹೋದರನನ್ನು ಕಳಕೊಳ್ಳುತ್ತಾನೆ.

## ೪೮. ವ್ಯಯಭಾವಗತ ಚತುರ್ಥೇಶಫಲ

**ಪರಾಶರಹೋರಾ**

**ಸುಖೇಶೇ ವ್ಯಯಭಾವಸ್ಥೇ ಗೃಹಾದಿಸುಖವರ್ಜಿತಃ ।**
**ಜಾತೋ ದುರ್ವ್ಯಸನೀ ಮೂಢಃ ಸದಾಽಲಸ್ಯಸಮನ್ವಿತಃ ॥**

ಚತುರ್ಥೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಗೃಹಾದಿ ಸುಖ ವಿಲ್ಲದವನು, ಜಾತಕನು ದುರ್ವ್ಯಸನಿಯು, ಮೂಢನು ಮತ್ತು ಯಾವಾಗಲೂ ಆಲಸ್ಯವಂತನು ಆಗಿರುತ್ತಾನೆ.

ಮಾನಸಾಗರೀ

> **ದ್ವಾದಶಗೇ ತುರ್ಯಪತೌ ಮೃತಪಿತೃಕೋ ವಾ ವಿದೇಶಗೋ ವಾಚ್ಯಃ।**
> **ಪುತ್ರಸ್ಯ ಪಾಪಖೇಟೇ ಚಾನ್ಯಪಿತುರ್ಜನ್ಮ ನಿರ್ದೇಶ್ಯಮ್ ॥**

ಚತುರ್ಥೇಶನು (ಶುಭಗ್ರಹನಾಗಿ) ವ್ಯಯಭಾವದಲ್ಲಿ ಇದ್ದಾಗ ಜಾತಕನ ತಂದೆಯ ಅವಸಾನ ಆಗುತ್ತದೆ. ಅಥವಾ ಆತನಿಗೆ ವಿದೇಶವಾಸ ಆಗುತ್ತದೆ. ಚತುರ್ಥಾಧಿಪತಿಯು ಪಾಪಗ್ರಹನಾಗಿ ವ್ಯಯಭಾವದಲ್ಲಿ ಇದ್ದಾಗ ಅನ್ಯಪಿತನಿಂದ ಜನಿಸಿದವನೆಂದು ಈ ಯೋಗವು ಸೂಚಿಸುತ್ತದೆ.

ಯವನಜಾತಕ

> **ವ್ಯಯಗತೇ ಸುಖಪೇ ಪಿತೃನಾಶಕೋ ಯದಿ ವಿದೇಶಗತೋ ಜನಕೋ ಭವೇತ್ ।**
> **ಭವತಿ ದುಷ್ಟಖಗೈರ್ಯುತ ಜಾತಕಃ ಶುಭಖಗೈಃ ಪಿತೃಸೌಖ್ಯಕರಃ ಸದಾ ॥**

ಚತುರ್ಥೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯ ನಾಶಕರನು, ಚತುರ್ಥಾಧಿಪತಿಯು ಕ್ರೂರಗ್ರಹರಿಂದ ಕೂಡಿದ್ದರೆ ಜಾತಕನ ತಂದೆಯು ವಿದೇಶಕ್ಕೆ ಹೋಗಿರುತ್ತಾನೆ. ಚತುರ್ಥಾಧಿಪತಿಯು ಶುಭಗ್ರಹರಿಂದ ಕೂಡಿದ್ದರೆ ಜಾತಕನು ಯಾವಾಗಲೂ ತಂದೆಗೆ ಸುಖದಾಯಕನು ಆಗುತ್ತಾನೆ.

ಅನುಭವದಲ್ಲಿ - ಚತುರ್ಥೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನ ಮನೆಯಲ್ಲಿ ಅಶಾಂತಿ, ಅನಾರೋಗ್ಯ, ಅಧಿಕ ಖರ್ಚು, ಆರ್ಥಿಕ ಅಡಚಣೆಯಿಂದ ಅಥವಾ ವ್ಯಾಪಾರ-ವ್ಯವಹಾರಕ್ಕೋಸ್ಕರ ಮಾಡಿದ ಸಾಲ ತೀರಿಸಲು ವಾಸದ ಮನೆಯನ್ನು ಅಡವು ಇಡುವ ಸಂಭವ ಬರುತ್ತದೆ, ಪ್ರಯಾಣಕಾಲ ಅಥವಾ ಸಂಚಾರ ಕಾಲದಲ್ಲಿ ಧನ ಅಥವಾ ವಸ್ತುಗಳನ್ನು ಕಳಕೊಳ್ಳುತ್ತಾನೆ, ಅಥವಾ ಕದ್ದು ಹೋಗುತ್ತದೆ, ಚತುರ್ಥೇಶನು ಶುಭಗ್ರಹನಾದರೆ ತೀರ್ಥಯಾತ್ರೆ ಸತ್ಕರ್ಮ ಸದ್ವಿನಿಯೋಗ ಸಂಭವಿಸುತ್ತದೆ.

# ಲಗ್ನಾಧಿಭಾವಗತ ಪಂಚಮೇಶಫಲ

## ೪೯. ಲಗ್ನಗತ ಪಂಚಮೇಶಫಲ

**ಪರಾಶರಹೋರಾ**

**ಸುತೇಶೇ ಲಗ್ನಗೇ ಜಾತೋ ವಿದ್ವಾನ್ ಪುತ್ರಸುಖಾನ್ವಿತಃ ।**
**ಕದರ್ಯೋ ವಕ್ರಚಿತ್ತಶ್ಚ ಪರದ್ರವ್ಯಾಪಹಾರಕಃ ॥**

ಪಂಚಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಪಂಡಿತನು, ವಿದ್ವಾಂಸನು, ಪುತ್ರಸುಖದಿಂದ ಕೂಡಿದವನು, ಕೃಪಣನು, ಮನಸ್ಸಿನಲ್ಲಿ ಕುಟಿಲತೆಯವನು ಮತ್ತು ಪರಧನ ಅಪಹರಿಸುತ್ತಾನೆ.

**ಮಾನಸಾಗರೀ**

**ಲಗ್ನಗತ ಪಂಚಮಪೇ ಪ್ರಸಿದ್ಧ ಸ್ತೋಕತನಯಪರಿಕಲಿತಮ್ ।**
**ಶಾಸ್ತ್ರವಿದಂ ವೇದವಿದಂ ಸುಕರ್ಮನಿರತಂ ತಥಾ ಕುರುತೇ ॥**

ಪಂಚಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಪ್ರಸಿದ್ಧನು, ಅಲ್ಪಸಂತಾನದಿಂದ ಸುಶೋಭಿತನು, ಶಾಸ್ತ್ರಪರಿಣಿತನು, ವೇದವನ್ನು ತಿಳಿದವನು ಹಾಗೂ ಸತ್ಕರ್ಮನಿರತನು ಆಗುತ್ತಾನೆ.

**ಯವನಜಾತಕ**

**ಲಗ್ನೇ ಗತೇ ಸಂತತಿಪೇ ಸುತಾನಾಂ ಸುಖಂ ಸುವಿದ್ಯಾಽತಿಮಂತ್ರಸಿದ್ಧಿಃ ।**
**ಶಾಸ್ತ್ರಾಣಿ ಜಾನಾತಿ ಸುಕರ್ಮಕಾರೀ ರಾಗಾಂಗಯುಕ್ತಃ ಖಲು ವಿಷ್ಣುಭಕ್ತಃ ॥**

ಪಂಚಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನಿಗೆ ಸಂತಾನ ಸುಖ, ಉತ್ತಮ ವಿದ್ಯೆ, ಮಂತ್ರಸಿದ್ಧಿ, ಶಾಸ್ತ್ರಗಳನ್ನು ತಿಳಿದವನು, ಸತ್ಕರ್ಮನಿರತನು ಮತ್ತು ವಿಷ್ಣುಭಕ್ತನು ಆಗುತ್ತಾನೆ.

ಅನುಭವದಲ್ಲಿ - ಪಂಚಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಮೇಧಾವಿಯು, ಪಂಡಿತನು, ಉತ್ತಮ ಸಂತಾನ ಉಳ್ಳವನು ಹಾಗೂ ಸಂತಾನ ಜನಿಸಿದ ನಂತರ ಜಾತಕನ ಏಳಿಗೆ ಆಗುತ್ತದೆ. ಲಗ್ನಸ್ಥ ಪಂಚಮೇಶನು

ಪಾಪಗ್ರಹನಾದರೆ ಜಾತಕನು ಶೀಘ್ರಕೋಪ ಉಳ್ಳವನು ಆಗುತ್ತಾನೆ, ಇದರಿಂದ ವಿಚಾರಧಾರೆಯಲ್ಲಿ ತಡೆ ಉಂಟಾಗುತ್ತದೆ ಮತ್ತು ಮಕ್ಕಳೊಂದಿಗೆ ಕಲಹ-ಜಗಳ ಸಂಭವಿಸುತ್ತದೆ.

## ೫೦. ದ್ವಿತೀಯ ಭಾವಗತ ಪಂಚಮೇಶಫಲ

**ಪರಾಶರಹೋರಾ**

**ಸುತೇಶೇ ಧನಗೇ ಜಾತೋ ಬಹುಪುತ್ರೋ ಧನಾನ್ವಿತಃ ।**
**ಕುಟುಂಬಪೋಷಕೋ ಮಾನೀ ಸ್ತ್ರೀಪ್ರಿಯಃ ಸುಯಶಾ ಭುವಿ ॥**

ಪಂಚಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಅನೇಕ ಪುತ್ರರು ಉಳ್ಳವನು, ಧನವಂತನು, ಕುಟುಂಬ ಪೋಷಕನು, ಮಾನವಂತನು, ಪತ್ನಿಯ ಪ್ರಿಯನು ಮತ್ತು ಲೋಕದಲ್ಲಿ ಉತ್ತಮ ಯಶಸ್ಸುಳ್ಳವನು ಆಗುತ್ತಾನೆ.

**ಮಾನಸಾಗರೀ**

**ಪಂಚಮಪತಿರ್ಧನಸ್ಥಃ ಕ್ರೂರೇ ಖೇಟೇ ಧನೋಜ್ಝಿತಂ ಕುರುತೇ ।**
**ಗೀತಾದಿಕಲಾಕಲಿತಂ ಕಷ್ಟಭುಜಂ ಸ್ಥಾನಕಪ್ರಚುರಮ್ ॥**

ಪಂಚಮೇಶನು ಕ್ರೂರಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಧನವನ್ನು ಬಿಟ್ಟವನು, ಸಂಗೀತಾದಿ ಕಲೆಗಳನ್ನು ಬಲ್ಲವನು, ಕಷ್ಟದಿಂದ ಭೋಜನ, ಧನ, ಹೇರಳಭೂಮಿ ಲಭಿಸುತ್ತದೆ.

**ಯವನಜಾತಕ**

**ಸುತೇಶೇ ಗತೇ ದ್ರವ್ಯಭಾವೇ ನರಃ ಸ್ಯಾತ್ಕುಲೇಶಾಪ್ತವಿತ್ತಃ ಕುಟುಂಬೇ ವಿರೋಧಿ।**
**ಭವೇದ್ಧಾನಿಕಾರೀ ಜನೋ ಭೋಗಸಕ್ತಃ ಶುಭೈರ್ಜೀವಪುತ್ರೋ ಭವೇದ್**
**ದ್ರವ್ಯನಾಥಃ ॥**

ಪಂಚಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಪಿತ್ರಾರ್ಜಿತ ಧನಲಭಿಸುತ್ತದೆ, ಕುಟುಂಬ ಕಲಹ ಮತ್ತು ಹಾನಿದಾಯಕನು, ಸುಖಭೋಗದಲ್ಲಿ ಆಸಕ್ತನು, ಪಂಚಮೇಶನು ಶುಭಗ್ರಹನ ಯುತಿಯಲ್ಲಿ ಇದ್ದರೆ ದೀರ್ಘಾಯುಷ್ಯ ಉಳ್ಳ ಪುತ್ರರು ಮತ್ತು ಧನಾಧಿಪತಿಯು ಆಗುತ್ತಾನೆ.

ಅನುಭವದಲ್ಲಿ - ಪಂಚಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಉತ್ತಮ ಪುತ್ರ ಸಂತಾನ ಉಳ್ಳವನು, ಕಲಾಕುಶಲನು, ವಾಕ್‌ಚಾತುರ್ಯ ಉಳ್ಳವನು ಮತ್ತು ಯಶಸ್ವಿಯು ಆಗುತ್ತಾನೆ. ಪಿತ್ರಾರ್ಜಿತ ಧನ-ಸಂಪತ್ತು ಲಭಿಸುತ್ತದೆ. ಪಂಚಮೇಶನು ಪಾಪಗ್ರಹನಾದರೆ ಜಾತಕನ ಮಾತಿನಲ್ಲಿ ತೀಕ್ಷ್ಣತೆ ಮಾತಿನಿಂದ ಕಲಹ ಮತ್ತು ಕುಟುಂಬೀಯರೊಂದಿಗೆ ವಾದ-ವಿವಾದದಿಂದ ಧನನಷ್ಟ ಆಗುತ್ತದೆ. ಜ್ಯಾಮೀನು ವ್ಯವಹಾರದಲ್ಲಿ ಹಾನಿಯಾಗುತ್ತದೆ. ಮಕ್ಕಳು ಬುದ್ಧಿವಂತರಾದರೂ ಅವರಲ್ಲಿ ಕೋಪ, ತೀಕ್ಷ್ಣತೆ ಮತ್ತು ಹಠತನ ಇರುತ್ತದೆ.

## ೫೧. ತೃತೀಯ ಭಾವಗತ ಪಂಚಮೇಶಫಲ

**ಪರಾಶರಹೋರಾ**

**ಸುತೇಶೇ ಸಹಜೇ ಭಾವೇ ಜಾಯತೇ ಸೋದರಪ್ರಿಯಃ ।**
**ಪಿಶುನಶ್ಚ ಕದರ್ಯಶ್ಚ ಸ್ವಕಾರ್ಯನಿರತಃ ಸದಾ ॥**

ಪಂಚಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರಲ್ಲಿ ಪ್ರೇಮ ಉಳ್ಳವನು, ದುರ್ಜನ, ಚಾಡಿಕೋರ, ಕೃಪಣನು ಮತ್ತು ಯಾವಾಗಲೂ ತನ್ನ ಕೆಲಸದಲ್ಲಿ ಮಗ್ನನು ಆಗಿರುತ್ತಾನೆ.

**ಮಾನಸಾಗರೀ**

**ತನಯಪತಿಃ ಸಹಜಗತಃ ಸುಮಧುರವಾಕ್ಯಂ ಬಂಧುಜನೇಷು ವಿದಿತಮ್ ।**
**ಕುರುತೇ ಸುತಾಸ್ತದೀಯಾಃ ಪರಿಪಾಲಯಂತಿ ತದ್‌ಬಂಧೂನ್ ॥**

ಪಂಚಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಿಹಿಯಾದ ಮಾತುಗಳನ್ನು ಆಡುವವನು, ಬಂಧುಜನರಲ್ಲಿ ಯಶಸ್ವಿಯು ಆಗುತ್ತಾನೆ, ಇವನ ಪುತ್ರರು ಬಂಧುಗಳನ್ನು ಪರಿಪಾಲಿಸುತ್ತಾರೆ.

**ಯವನಜಾತಕ**

**ಸುತೇಶೇಗತೇ ವಿಕ್ರಮೇ ವಿಕ್ರಮಿ ಸ್ಯಾತ್ಸುಹೃಚ್ಛಾಂತಿಯುಕ್ತೋ ವಚೋಮಾಧುರೀಯುಕ್ ।**
**ಶುಭೇ ಖೇಟಯುಕ್ತೇ ಶುಭಪ್ರಾಪ್ತಿಕಾರೀ ಮನಃಕಾರ್ಯಸಿದ್ಧಿಃ ಸುಖೀ ಶಾಂತನಮ್ರಃ**

ಪಂಚಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಪರಾಕ್ರಮವಂತನು, ಮಿತ್ರ, ಶಾಂತಿಯುತನು, ಸಿಹಿಯಾದ ಮಾತುಗಳು, ಪಂಚಮೇಶನು ಶುಭಗ್ರಹರಿಂದ ಕೂಡಿದ್ದರೆ ಶುಭಲಾಭ ಆಗುತ್ತದೆ, ಚಿಂತಿತಕಾರ್ಯ ಫಲಿಸುತ್ತದೆ, ಸುಖವಂತನು, ಶಾಂತಸ್ವಭಾವದವನು ಮತ್ತು ನಮ್ರತೆ ಉಳ್ಳವನು ಆಗಿರುತ್ತಾನೆ.

ಅನುಭವದಲ್ಲಿ - ಪಂಚಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಲ್ಲಿ ಗಹನವಾದ ಚಿಂತನೆ ಮತ್ತು ಸಂಶೋಧನಾ ಪ್ರವೃತ್ತಿ ಇರುತ್ತದೆ, ಸಹೋದರರ ಏಳಿಗೆಗೆ ಪ್ರಯತ್ನಿಸುತ್ತಾನೆ, ಕೃಪಣತೆ ಇರುತ್ತದೆ, ಪಂಚಮೇಶನು ಪಾಪಗ್ರಹನಾದರೆ ಜಾತಕನು ಸತತಪ್ರಯತ್ನ ಮತ್ತು ಹಠತನದಿಂದ ಕೈಕೊಂಡ ಕಾರ್ಯಗಳನ್ನು ಪೂರೈಸುತ್ತಾನೆ.

## ೫.೨. ಚತುರ್ಥಭಾವಗತ ಪಂಚಮೇಶಫಲ

ಪರಾಶರಹೋರಾ

ಸುತೇಶೇ ಸುಖಭಾವಸ್ಥೇ ಸುಖೀ ಮಾತೃಸುಖಾನ್ವಿತಃ ।
ಲಕ್ಷ್ಮೀಯುಕ್ತಃ ಸುಬುದ್ಧಿಶ್ಚ ರಾಜ್ಞೋಽಮಾತ್ಯೋಽಥವಾ ಗುರುಃ ॥

ಪಂಚಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಸುಖವಂತನು ಹಾಗೂ ಮಾತೃಸುಖ ಉಳ್ಳವನು, ಧನ-ಸಂಪತ್ತಿನಿಂದ ಕೂಡಿದವನು, ಉತ್ತಮ ಬುದ್ಧಿವಂತನು, ರಾಜನು, ಮಂತ್ರಿಯು ಅಥವಾ ರಾಜ ಗುರು ಆಗುತ್ತಾನೆ.

ಮಾನಸಾಗರೀ

ಸುತಪಃ ಪಾತಾಲಗತಃ ಪಿತೃಕರ್ಮರತಂ ಪ್ರಪಾಲಿತಂ ಪಿತ್ರಾ ।
ಜನನೀಭಕ್ತಂ ಕುರುತೇ ಕ್ರೂರೈಸ್ತು ವಿರೋಧಿನಂ ಪಿತೃಭಿಃ ॥

ಪಂಚಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆಯ ಕಾರ್ಯ ಮಗ್ನನು, ತಂದೆಯಿಂದ ಪಾಲಿಸಲ್ಪಟ್ಟವನು, ತಾಯಿಯ ಭಕ್ತನು ಆಗುತ್ತಾನೆ. ಪಂಚಮಾಧಿಪತಿಯು ಕ್ರೂರಗ್ರಹನಾದರೆ ಜಾತಕನಿಗೆ ತನ್ನ ತಂದೆಯೊಂದಿಗೆ ವಿರೋಧ ಭಾವನೆ ಇರುತ್ತದೆ.

ಯವನಜಾತಕ

ಸುತಪತಿಃ ಕುರುತೇ ಸುಖಭಾವಗೋ ಜನಕ ಭಕ್ತಿಕರಂ ಕುಶಲಂ ನರಮ್ ।
ತದನು ಪೂರ್ವಜಕರ್ಮಕರಂ ಸದಾ ಕವಿಜನೇ ವಸುವಸ್ತ್ರ ನಿರೂಪಣಮ್ ॥

ಪಂಚಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಹೆತ್ತವರಲ್ಲಿ ಭಕ್ತಿಉಳ್ಳವನು, ಪೂರ್ವಜರಕರ್ಮ ಮಾಡುವವನು ಮತ್ತು ಕವಿಜನರಿಗೆ ಧನವಸ್ತ್ರ ನೀಡುತ್ತಾನೆ.

ಅನುಭವದಲ್ಲಿ - ಪಂಚಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ರಾಜಯೋಗ ಕಾರಕನು ಆಗುತ್ತಾನ, ಮಾತೃಸುಖಿ ಉಳ್ಳವನು, ಭೂಮಿ-ಮನೆ, ವ್ಯಾಪಾರ-ವ್ಯವಹಾರದಿಂದ ಮತ್ತು ಕೃಷಿಬೇಸಾಯದಿಂದ ಧನ-ಸಂಪತ್ತುಗಳಿಸುತ್ತಾನೆ, ಭೂ-ಸಂಪತ್ತು ಲಭಿಸುತ್ತದೆ. ಯಶಸ್ವಿಯೂ ಕೀರ್ತಿವಂತನು ಆಗುತ್ತಾನೆ.

## ೫೩. ಪಂಚಮಭಾವಗತ ಪಂಚಮೇಶಫಲ

**ಪರಾಶರಹೋರಾ**

**ಸುತೇಶೇ ಸುತಭಾವಸ್ಥೇ ಶುಭಾಢ್ಯೇ ಪುತ್ರವಾನ್ ನರಃ ।**
**ಪಾಪಾಢ್ಯೇऽಪತ್ಯಹೀನೋऽಸೌ ಗುಣವಾನ್ ಮಿತ್ರವತ್ಸಲಃ ॥**

ಪಂಚಮೇಶನು ಪಂಚಮಭಾವದಲ್ಲಿ ಶುಭಗ್ರಹನೊಂದಿಗೆ ಇದ್ದಾಗ ಜಾತಕನು ಪುತ್ರವಂತನು ಆಗುತ್ತಾನೆ. ಪಂಚಮೇಶನು ಪಾಪಗ್ರಹನೊಂದಿಗೆ ಇದ್ದರೆ ಜಾತಕನು ಸಂತಾನಹೀನನು ಆಗುತ್ತಾನೆ, ಆದರೆ ಗುಣವಂತನು ಮತ್ತು ಮಿತ್ರರಿಗೆ ಪ್ರಿಯನು ಆಗುತ್ತಾನೆ.

**ಮಾನಸಾಗರೀ**

**ತನಯಗತಸ್ತನಯಪತಿರ್ಮತಿಮಂತಂ ಮಾನಿತಂ ಜನಂ ಕುರುತೇ ।**
**ಸುತಕಲಿತಂ ಪ್ರಕಟಜನವಿಖ್ಯಾತಂ ಮಾನವಂ ಕುರುತೇ ॥**

ಪಂಚಮೇಶನು ಪಂಚಮಭಾವದಲ್ಲಿ ಇದ್ದಾಗ ಜನಿಸಿದವನು ಅತಿಬುದ್ಧಿವಂತನು, ಸನ್ಮಾನಿತನು, ಉತ್ತಮಪುತ್ರರು ಉಳ್ಳವನು, ಹಾಗೂ ಸನ್ಮಾನಿತ ಜನರಲ್ಲಿ ಪ್ರಸಿದ್ಧನು ಆಗುತ್ತಾನೆ.

**ಯವನಜಾತಕ**

**ತನಯಭಾವಪತಿಸ್ತನಯಸ್ಥಿತೋ ಮತಿಯುತಂ ವಚನಂ ಪ್ರಬಲಂ ಜನಮ್ ।**
**ಬಹುಲಮಾನಯುತಂ ಪುರುಷೋತ್ತಮಂ ಪ್ರವರಲೋಕವರಂ ಕುರುತೇ ನರಮ್ ॥**

ಪಂಚಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಬುದ್ಧಿವಂತನು, ಮಾತಿನಲ್ಲಿ ಪ್ರಬಲತೆ ಉಳ್ಳವನು, ಅಧಿಕ ಮಾನವಂತನು, ಪುರುಷಶ್ರೇಷ್ಠನು, ಹಾಗೂ ಎಲ್ಲರಿಗಿಂತ ಶ್ರೇಷ್ಠನು ಆಗಿರುತ್ತಾನೆ.

ಅನುಭವದಲ್ಲಿ - ಪಂಚಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಮೇಧಾವಿಯು, ಪ್ರಸಿದ್ಧನು, ಉತ್ತಮ ಸಂತಾನ ಉಳ್ಳವನು ಆಗುತ್ತಾನೆ, ಪಂಚಮೇಶನು ಪಾಪಗ್ರಹನಾಗಿ ಪಂಚಮಭಾವದಲ್ಲಿ ಇದ್ದರೆ ಜಾತಕನಿಗೆ ಸಂತತಿದೋಷಪ್ರದನು ಆಗುತ್ತಾನೆ, ಸಂತಾನನಷ್ಟ ಅಥವಾ ಅಸಂತತಿ ನೀಡುತ್ತಾನೆ, ಈ ಪಂಚಮೇಶನೊಂದಿಗೆ ಇನ್ನೊಬ್ಬ ಪಾಪಗ್ರಹನಿದ್ದರೆ ಜಾತಕನಿಗೆ ಬಹುಸಂತತಿಯೋಗ ಆಗುತ್ತದೆ.

ಮಾದರಿ ಜಾತಕ -

| ಕೇತು ೧೨<br>ಶುಕ್ರ ೧೦<br>ಗುರು ೯ | ಶನಿ ೨<br>ಕುಜ ೪ | | |
|---|---|---|---|
| ಬುಧ ೩<br>ರವಿ ೧೦ | ಜ.ತಾ. 24-2-1940 | | |
| | ಸ್ತ್ರೀ | | ಚಂದ್ರ ೬ |
| ಲಗ್ನ ೪ | ಮಾಂದಿ ೧೨ | | ರಾಹು ೬ |

ಶಿಷ್ಟ ಶುಕ್ರದಶಾ ವರ್ಷ ೧೩ ಮಾಸ ೧ ದಿನ ೬

ಮಾದರಿಜಾತಕ ಧನುರ್ಲಗ್ನ ಜಾತಕಳಿಗೆ ಪಂಚಮೇಶನು ಪಂಚಮಭಾವವಾದ ಮೇಷರಾಶಿಯಲ್ಲಿ ಶನಿಯಯುತಿಯಲ್ಲಿ ಇದ್ದಾನೆ, ಜಾತಕಳಿಗೆ ಚಂದ್ರದಶಾ ರಾಹುಭುಕ್ತಿಯಲ್ಲಿ ವಿವಾಹ ಆಗಿರುತ್ತದೆ, ರಾಹು ಭುಕ್ತಿಯಲ್ಲಿಯೇ ಪ್ರಥಮ ಹೆಣ್ಣು ಶಿಶು ಉದರದಲ್ಲಿ ಮೃತವಾಗಿ ಜನಿಸಿರುತ್ತದೆ, ಚಂದ್ರದಶಾ ಗುರುಭುಕ್ತಿಯಲ್ಲಿ ಎರಡನೇ ಹೆಣ್ಣುಶಿಶು ಜನನವಾದ ಐದು ಮಿನಿಟುನಂತರ ತೀರಿಹೋಗಿರುತ್ತದೆ, ಅನಂತರ ಚಿಕಿತ್ಸೆ ಮತ್ತು ಸೂಕ್ತ ಪರಿಹಾರ ಮಾಡಿದನಂತರ ಜಾತಕಳಿಗೆ ಐದು ಸಂತಾನ (3 ಸ್ತ್ರೀ ಮತ್ತು 2 ಪುರುಷ) ಜನಿಸಿರುತ್ತದೆ, ಪಂಚಮ ಭಾವಸ್ಥಿತ ಎರಡು ಪಾಪಗ್ರಹರಿಂದ ಜಾತಕಳಿಗೆ ಸಂತಾನ ಸುಖ ಲಭಿಸಿರುತ್ತದೆ.

## ೫೪. ಷಷ್ಠಭಾವಗತ ಪಂಚಮೇಶಫಲ

**ಪರಾಶರಮತ**

**ಸುತೇಶೇ ರಿಪುಭಾವಸ್ಥೇ ಪುತ್ರಃ ಶತ್ರುಸಮೋ ಭವೇತ್ ।**
**ಮೃತಾಪತ್ಯೋಽಥವಾ ಜಾತೋ ದತ್ತಕ್ರೀತ ಸುತೋಽಥವಾ ॥**

ಪಂಚಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಆತನ ಪುತ್ರನು ಶತ್ರುಸಮಾನನು ಆಗುತ್ತಾನೆ, ಅಥವಾ ಸಂತಾನನಷ್ಟ ಆಗುತ್ತದೆ. ಜಾತಕನಿಗೆ ದತ್ತಪುತ್ರಯೋಗ ಅಥವಾ ಪಡಕೊಂಡಸಂತಾನ ಯೋಗ ಆಗುತ್ತದೆ.

**ಮಾನಸಾಗರೀ**

**ಪಂಚಮಪತಿಶ್ಚ ಷಷ್ಠೇ ಶತ್ರುಯುತಂ ಮಾನಹೀನಂ ಚ ।**
**ರೋಗಯುತಂ ಧನರಹಿತಂ ಕ್ರೂರಃ ಖಚರಃ ಕರೋತಿ ನರಮ್ ॥**

ಪಂಚಮೇಶನು ಕ್ರೂರಗ್ರಹನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ ಶತ್ರುಗಳಿಂದ ಕೂಡಿದವನು, ಮಾನಹೀನನು, ನಿಂದಿತನು, ರೋಗದಿಂದ ಕೂಡಿದವನು ಮತ್ತು ಧನರಹಿತನು ಆಗುತ್ತಾನೆ.

**ಯವನಜಾತಕ**

**ರಿಪುಗತಸ್ತನಯಾಧಿಪತಿರ್ಯದಾ ರಿಪುಜನಾಭಿರತಂ ಕುರುತೇ ನರಮ್ ।**
**ಸ್ಥಿತತನುಂ ಬಹುದೋಷಯುತಂ ಸದಾ ಧನಸುತೈ ರಹಿತಂ ಖಲಖೇಚರೈಃ ॥**

ಪಂಚಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳಲ್ಲಿ ಹೆಚ್ಚು ಆಸಕ್ತಿ ಉಳ್ಳವನು, ದೃಢಶರೀರ, ಅನೇಕದೋಷಗಳಿಂದ ಕೂಡಿದವನು ಆಗುತ್ತಾನೆ, ಷಷ್ಠಭಾವಸ್ಥಿತ ಪಂಚಮೇಶನು ಕ್ರೂರಗ್ರಹರಿಂದ ಕೂಡಿದ್ದರೆ ಜಾತಕನುಧನ, ಪುತ್ರರಹಿತನು ಆಗುತ್ತಾನೆ.

ಅನುಭವದಲ್ಲಿ - ಪಂಚಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಸಂತತಿದೋಷ ನೀಡುತ್ತಾನೆ, ಸಾಮಾನ್ಯವಾಗಿ ಈ ದೋಷದಿಂದ ಜಾತಕನಿಗೆ ಸಂತಾನ ಆಗುವುದಿಲ್ಲ ಅಥವಾ ಜನಿಸಿದ ಮಕ್ಕಳಲ್ಲಿ ಅಂಗವಿಕಲತೆ ಇರುತ್ತದೆ, ತಂದೆ ಮಕ್ಕಳಲ್ಲಿ ಕಲಹ, ವಾದ-ವಿವಾದ ಇರುತ್ತದೆ, ಅಥವಾ ದತ್ತಪುತ್ರಯೋಗ

ಆಗುತ್ತದೆ, ಷಷ್ಠಭಾವಸ್ಥಿತ ಪಂಚಮಾಧಿಪತಿಯಿಂದ ಜಾತಕನಿಗೆ ಸಂತಾನಚಿಂತೆ ಇರುತ್ತದೆ, ಪಂಚಮೇಶನು ಕ್ರೂರಗ್ರಹನಾದರೆ ಜಾತಕನಿಗೆ ಶತ್ರುಪೀಡೆ, ಅನಾರೋಗ್ಯ ಅಥವಾ ಅವಮಾನ ಸಂಭವಿಸುತ್ತದೆ ಹಾಗೂ ಧನರಹಿತನು ಆಗುತ್ತಾನೆ.

## ೫೫. ಸಪ್ತಮಭಾವಗತ ಪಂಚಮೇಶಫಲ

**ಪರಾಶರಮತ**

**ಸುತೇಶೇ ಸಪ್ತಮೇ ಮಾನೀ ಸರ್ವಧರ್ಮಸಮನ್ವಿತಃ ।**
**ಪುತ್ರಾದಿಸುಖಯುಕ್ತಶ್ಚ ಪರೋಪಕರಣೇ ರತಃ ॥**

ಪಂಚಮೇಶನು ಸಪ್ತಮಭಾವದಲ್ಲಿ ಇದ್ದಾಗ ಆತ್ಮಗೌರವ ಉಳ್ಳವನು, ಎಲ್ಲಧರ್ಮವನ್ನು ಸಮಾನತೆಯಿಂದ ನೋಡುತ್ತಾನೆ, ಪುತ್ರಾದಿ ಸುಖ ಉಳ್ಳವನು ಮತ್ತು ಪರೋಪಕಾರ ನಿರತನು ಆಗುತ್ತಾನೆ.

**ಮಾನಸಾಗರೀ**

**ತನಯಪತೌ ಸಪ್ತಮಗೇ ಸ್ವಸುತಾಃ ಸುಭಗಾಶ್ಚ ದೇವಗುರುಭಕ್ತಾಃ ।**
**ಪ್ರಿಯವಾದಿನೀ ಸುಶೀಲಾ ನರಸ್ಯ ನನು ಜಾಯತೇ ದಯಿತಾ ॥**

ಪಂಚಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪುತ್ರರು ಭಾಗ್ಯವಂತರು, ಗುರು ಮತ್ತು ದೇವರಭಕ್ತರು, ಜಾತಕನ ಪತ್ನಿಯು ಸದ್ಗುಣವಂತಳು ಮತ್ತು ಮಧುರವಾದ ಮಾತಗಳನ್ನು ಆಡುವವಳು ಆಗಿರುತ್ತಾಳೆ.

**ಯವನಜಾತಕ**

**ಮದನಗಸ್ತನಯಸ್ಥಲನಾಯಕಃ ಸುಭಗಪುತ್ರವತೀ ದಯಿತಾ ಸದಾ।**
**ಸ್ವಜನಭಕ್ತಿರತಾ ಪ್ರಿಯವಾದಿನೀ ಸುಜನಶೀಲವತೀ ತನುಮಧ್ಯಮಾ ॥**

ಪಂಚಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ದಯಾವತಿಯೂ, ಅದೃಷ್ಟವಂತಳು, ಪುತ್ರವಂತಳು, ಸ್ವಜನರಲ್ಲಿ ಭಕ್ತಿಉಳ್ಳವಳು, ಪ್ರಿಯವಾದ ಮಾತುಗಳು,ಅಥವಾ ವಾದ. ಉಪಕಾರ ಬುದ್ಧಿ, ಧರ್ಮಬುದ್ಧಿ ಉಳ್ಳವಳು, ಶೀಲವಂತಳು ಮತ್ತು ಸೊಂಟದ ಹತ್ತಿರದ ಭಾಗ ಸಪೂರ ಇರುತ್ತದೆ.

ಅನುಭವದಲ್ಲಿ - ಸಪ್ತಮಭಾವವು ನಿವೃತ್ತಿಸ್ಥಾನ ಆಗಿರುತ್ತದೆ, ಪೂರ್ವಪುಣ್ಯಸ್ಥಾನವಾದ ಪಂಚಮಭಾವದ ಅಧಿಪತಿಯು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಏಳಿಗೆಗೆ ಸಹಾಯಕನಾಗುತ್ತಾನೆ. ಜಾತಕನು ನ್ಯಾಯವಂತನುಮತ್ತು ದೇವ ಬ್ರಾಹ್ಮಣರ ಆರಾಧಕನು ಆಗುತ್ತಾನೆ, ಸಂತಾನ ಜನಿಸಿದ ನಂತರ ಅಭಿವೃದ್ಧಿ ಹೊಂದುತ್ತಾನೆ. ಪತ್ನಿಯು ಸದ್ಗುಣವಂತಳು, ಭಾಗ್ಯವಂತಳು, ಪರೋಪಕಾರ ಮತ್ತು ದೇವ ಬ್ರಾಹ್ಮಣರ ಸೇವೆ ಮಾಡುತ್ತಾಳೆ ಮತ್ತು ಧಾರ್ಮಿಕ ಕಾರ್ಯ-ಕಲಾಪದಲ್ಲಿ ಅನುರಕ್ತಳು ಆಗುತ್ತಾಳೆ.

ಪಂಚಮೇಶನು ಪಾಪಗ್ರಹನಾಗಿ ಸಪ್ತಮಭಾವದಲ್ಲಿ ಇದ್ದರೆ ಜಾತಕನ ಪತ್ನಿಯ ನಾಶ ಆಗುತ್ತದೆ, ಸ್ತ್ರೀ ಸಂತಾನ ಪಡೆಯುತ್ತಾನೆ.

## ೫೬. ಅಷ್ಟಮಭಾವಗತ ಪಂಚಮೇಶಫಲ

**ಪರಾಶರಹೋರಾ**

**ಸುತೇಶೇ ರಂಧ್ರಭಾವಸ್ಥೇ ಸ್ವಲ್ಪಪುತ್ರಸುಖಾನ್ವಿತಃ ।**
**ಕಾಸಶ್ವಾಸಸಮಾಯುಕ್ತಃ ಕ್ರೋಧೀ ಚ ಸುಖವರ್ಜಿತಃ ॥**

ಪಂಚಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ಅಲ್ಪಪುತ್ರಸಂತಾನ, ಸುಖವಂತನು, ಕೆಮ್ಮು ಮತ್ತು ಉಬ್ಬಸದಿಂದ ಪೀಡಿತನು, ಕೋಪಉಳ್ಳವನು ಮತ್ತು ಸುಖರಹಿತನು ಆಗುತ್ತಾನೆ.

**ಮಾನಸಾಗರೀ**

**ಸುತಪೇ ನಿಧನಗೃಹಸ್ಥೇ ಕಟುವಾಕ್ಯೋ ಭಾರ್ಯಾಯಾಽಯುತೋ ಭವತಿ ।**
**ಸವ್ಯಂಗಚಂಡಶಬ್ದಾಃ ಸಹಜಾಂಸ್ತನಯಾ ಭವಂತಿ ಯಥಾ ॥**

ಪಂಚಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜನಿಸಿದವನು ಕ್ರೂರವಾದ ಮಾತುಗಳನ್ನು ಆಡುವವನು, ಪತ್ನಿಯೊಂದಿಗೆ ಕೂಡದಿರುವವನು, ಅವನ ಪುತ್ರ ಮತ್ತು ಸಹೋದರರನು ವ್ಯಂಙ್ಗ ಮತ್ತು ತೀಕ್ಷ್ಣವಾದ ಮಾತುಗಳನ್ನು ಆಡುವವರು ಆಗಿರುತ್ತಾರೆ.

**ಸುತಪತೌ ನಿಧನಸ್ಥಲಗೇ ನರಃ ಕುವಚನಾಭಿರತೋ ವಿಗತಾಂಗಕಃ ।**
**ಭವತಿ ಚಂಡರುಚಿಶ್ಚಪಲೋ ನರೋ ಗತಧನೋ ವಿಕಲಃ ಶಠತಸ್ಕರಃ ॥**

ಪಂಚಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕೆಟ್ಟ ಮಾತುಗಳನ್ನು ಆಡುವವನು, ಅಂಗವಿಕಲತೆ ಉಳ್ಳವನು, ಉಗ್ರನು, ಅರುಚಿ, ಚಪಲತೆ, ಧನರಹಿತನು, ವಿಕಲತೆ ಉಳ್ಳವನು, ದೂರ್ತನು ಮತ್ತು ಕಳ್ಳನು ಆಗುತ್ತಾನೆ.

ಅನುಭವದಲ್ಲಿ – ಪಂಚಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಲ್ಪ ಪುತ್ರಸಂತಾನ ಉಳ್ಳವನು, ತಂದೆ-ಮಕ್ಕಳಲ್ಲಿ ವಾದವಿವಾದ ಇರುತ್ತದೆ, ತೀಕ್ಷ್ಣವಾದಮಾತುಗಳನ್ನು ಆಡುತ್ತಾರೆ.

ಪಂಚಮೇಶನು ಪಾಪಗ್ರಹನಾಗಿ ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ಅಪಘಾತ, ಸಂತಾನನಷ್ಟಯೋಗ ಸಂಭವಿಸುತ್ತದೆ, ಭೂ ವ್ಯವಹಾರದಲ್ಲಿ ಹಾನಿ ಅಥವಾ ನೂತನಮನೆ ಕಟ್ಟಿಸಿ ಆರ್ಥಿಕ ಒತ್ತಡಕ್ಕೀಡಾಗುತ್ತಾರೆ, ಇವರು ಬುದ್ಧಿವಂತರು ಆದರೆ ಕೆಲವೊಮ್ಮೆ ಆಲೋಚನೆಮಾಡದೆ ಕಾರ್ಯ ನಿರ್ವಹಿಸಿ, ಅನಂತರ ನಷ್ಟಕ್ಕೀಡಾಗಿ ಪರಿತಪಿಸುತ್ತಾರೆ, ಮಿತ್ರರಿಗೆ, ಸಂಭಂಧಿಕರಿಗೆ ಸಹಾಯಮಾಡಿ ಅಥವಾ ಜಾಮೀನು ವ್ಯವಹಾರದಿಂದ ಆರ್ಥಿಕ ಹಾನಿ ಗೀಡಾಗುತ್ತಾರೆ ಅಥವಾ ಸಾಲವ್ಯಾಪಾರದಿಂದ ಧನನಷ್ಟ ಹೊಂದುತ್ತಾರೆ, ಆರ್ಥಿಕ ಏರಿಳಿತ ಇರುತ್ತದೆ ಅಥವಾ ಸಾಲ ವ್ಯಾಪಾರದಿಂದ ಧನನಷ್ಟ ಹೊಂದುತ್ತಾರೆ. ಕೆಲವೊಮ್ಮೆ ಅಕಸ್ಮಾತ್ ಧನಲಾಭ ಸಂಭವನೀಯ.

## ೫೭. ನವಮಭಾವಗತ ಪಂಚಮೇಶಫಲ

ಪರಾಶರಹೋರಾ

**ಸುತೇಶೇ ಭಾಗ್ಯಗೇ ಪುತ್ರೋ ಭೂಪೋ ವಾ ತತ್ಸಮೋ ಭವೇತ್ ।**
**ಸ್ವಯಂ ವಾ ಗ್ರಂಥಕರ್ತಾ ಚ ವಿಖ್ಯಾತಃ ಕುಲದೀಪಕಃ ॥**

ಪಂಚಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ರಾಜನು ಅಥವಾ ರಾಜತುಲ್ಯನು ಆಗುತ್ತಾನೆ, ಗ್ರಂಥಕರ್ತನಾಗಿ ಪ್ರಖ್ಯಾತನು ಆಗುತ್ತಾನೆ ಮತ್ತು ತನ್ನಕುಲದೀಪಕನು ಆಗುತ್ತಾನೆ.

ಮಾನಸಾಗರಿ

**ಸುಕೃತಗತ ಸ್ತನಯುಪತಿಃ ಸುಬೋಧವಿದ್ಯಂ ಕವಿಂ ಸುಗೀತಿಜ್ಞಮ್ ।**
**ನೃಪಪೂಜಿತಂ ಸುರೂಪಂ ನಾಟಕರಸಿಕಂ ನರಂ ಕುರುತೇ ॥**

ಪಂಚಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಒಳ್ಳೆಯ ಸಲಹೆ ನೀಡುವ ವಿದ್ಯೆಬಲ್ಲವನು, ಕವಿಯು, ಉತ್ತಮ ಸಂಗೀತ ಜ್ಞಾನ ಉಳ್ಳವನು, ರಾಜನಿಂದ ಸನ್ಮಾನಿತನು ಸುಂದರನು ಹಾಗೂ ನಾಟಕದಲ್ಲಿ ಅಭಿರುಚಿ ಉಳ್ಳವನು ಆಗುತ್ತಾನೆ.

ಯವನಜಾತಕ

**ಸುಕೃತಭಾವಗತಸ್ತನಯಾಧಿಪಃ ಸಮವಿತರ್ಕವಿಭಾಜನ ವಲ್ಲಭಃ ।**
**ಸಕಲಶಾಸ್ತ್ರಕಲಾಕುಶಲೋ ಭವೇನ್ನೃಪತಿದತ್ತರಥಾಶ್ವಯುತೋ ನರಃ ॥**

ಪಂಚಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಊಹೆ, ಸಂಶಯ, ಜ್ಞಾನ ಉಳ್ಳವನು, ಜನರಿಗೆ ಪ್ರಿಯನಾದವನು, ಎಲ್ಲ ಶಾಸ್ತ್ರ, ಕಲೆಗಳಲ್ಲಿ ಕುಶಲನು, ರಾಜನಿಂದ ಕೊಡಲ್ಪಟ್ಟರಥ, ಕುದುರೆ ಉಳ್ಳವನು ಆಗುತ್ತಾನೆ.

ಅನುಭವದಲ್ಲಿ - ಪಂಚಮೇಶನು ನವಮಭಾವದಲ್ಲಿ ಇದ್ದಾಗ ಇದು ಜ್ಞಾನಯೋಗ, ಕೀರ್ತಿಯೋಗ ಮತ್ತು ವೃದ್ಧಿಯೋಗ ಆಗುತ್ತದೆ, ಜಾತಕನು ಸಕಲ ವಿದ್ಯೆಗಳನ್ನು ಬಲ್ಲವನು, ಶಾಸ್ತ್ರ, ಧಾರ್ಮಿಕ ವಿಧಿ ವಿಧಾನ ಮತ್ತು ಜ್ಞಾನಪ್ರಸಾರ ಮಾಡುವವನು, ಗ್ರಂಥಕರ್ತನು, ಸನ್ಮಾನಿತನು, ಜನಪ್ರಿಯನು ಕಲಾಕುಶಲನು ಆಗುತ್ತಾನೆ ಹಾಗೂ ತನ್ನ ಕುಲಕ್ಕೆ ಕೀರ್ತಿತರುತ್ತಾನೆ, ಮಕ್ಕಳು ಭಾಗ್ಯವಂತರು ಮತ್ತು ಬುದ್ಧಿವಂತರು ಆಗಿರುತ್ತಾರೆ.

## ೫೮. ದಶಮಭಾವಗತ ಪಂಚಮೇಶಫಲ

ಪರಾಶರಹೋರಾ

**ಸುತೇಶೇ ರಾಜ್ಯಭಾವಸ್ಥೇ ರಾಜಯೋಗೋ ಹಿ ಜಾಯತೇ ।**
**ಅನೇಕ ಸುಖಭೋಗೀ ಚ ಖ್ಯಾತಕೀರ್ತಿರ್ನರೋ ಭವೇತ್ ॥**

ಪಂಚಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನಿಗೆ ರಾಜಯೋಗ ಉಂಟಾಗುತ್ತದೆ. ಅನೇಕ ಸುಖ-ಭೋಗ ಹಾಗೂ ಪ್ರಖ್ಯಾತನು ಮತ್ತು ಕೀರ್ತಿವಂತನು ಆಗುತ್ತಾನೆ.

> ಸುತಪತಿರಂಬರಲೀನೋ ನೃಪಕರ್ಮಾಣಂ ನೃಪಾತ್ ಕಲಿತಭಾವಮ್ ।
> ಸತ್ಕರ್ಮರತಂ ಪ್ರವರಂ ಜನನೀ ಸುಖಕೃತ್ಸುತಂ ಕುರುತೇ ॥

ಪಂಚಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಕಾರ್ಯದಲ್ಲಿ ನಿರತನು, ರಾಜನಿಂದ ಸನ್ಮಾನ ಪಡೆಯುತ್ತಾನೆ, ಶುಭಕಾರ್ಯಗಳಲ್ಲಿ ನಿರತನು ಮತ್ತು ತಾಯಿಗೆ ಸುಖನೀಡುವ ಮಗನು ಆಗಿರುತ್ತಾನೆ.

ಯವನಜಾತಕ

> ದಶಮಗಃ ಕುರುತೇ ಸುತನಾಯಕೋ ನೃಪತಿಕರ್ಮಕರಂ ಸುಖಸಂಯುತಮ್ ।
> ವಿವಿಧಲಾಭಯುತಂ ಪ್ರವರಂ ನರಂ ಪ್ರವರಕರ್ಮಕರಂ ವನಿತಾರತಮ್ ॥

ಪಂಚಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನ ಕೆಲಸ ಮಾಡುವವನು, ಸುಖದಿಂದ ಕೂಡಿದವನು, ವಿವಿಧತರದ ಲಾಭ ಪಡೆಯುತ್ತಾನೆ, ಶ್ರೇಷ್ಠ ವ್ಯಕ್ತಿಯು, ಉತ್ತಮ ಕೆಲಸ ಮಾಡುವವನು ಮತ್ತು ಸ್ತ್ರೀ ಪ್ರಿಯನು ಆಗುತ್ತಾನೆ. ತ್ರಿಕೋಣಾಧಿಪತಿಯಾದ ಪಂಚಮೇಶನು ದಶಮ ಕೇಂದ್ರದಲ್ಲಿ ಇದ್ದಾಗ ಜಾತಕನಿಗೆ ರಾಜಯೋಗಕಾರಕನು ಆಗುತ್ತಾನೆ, ಸುಖವಂತನು, ಮಾತೃಸುಖ ಉಳ್ಳವನು, ಮತ್ತು ತಾಯಿಯನ್ನು ಪ್ರೀತಿ ಮತ್ತು ಮಮತೆಯಿಂದ ನೋಡಿಕೊಳ್ಳುತ್ತಾನೆ, ಸಮಾಜದಲ್ಲಿ ಗಣ್ಯವ್ಯಕ್ತಿಯಾಗುತ್ತಾನೆ, ಮಕ್ಕಳು ಬುದ್ಧಿವಂತರು ವಿದ್ಯಾವಂತರು ಆಗಿ ಉನ್ನತ ಹುದ್ದೆಯಲ್ಲಿದ್ದು ಅಭಿವೃದ್ಧಿ ಹೊಂದುತ್ತಾನೆ.

## ೫೯. ಏಕಾದಶಭಾವಗತ ಪಂಚಮೇಶಫಲ

ಪರಾಶರಹೋರಾ

> ಸುತೇಶೇ ಲಾಭಗೇ ಜಾತೋ ವಿದ್ಯಾವಾನ್ ಜನವಲ್ಲಭಃ ।
> ಗ್ರಂಥಕರ್ತಾ ಮಹಾದಕ್ಷೋ ಬಹುಪುತ್ರಧನಾನ್ವಿತಃ ॥

ಪಂಚಮೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು, ಜನರ ಪ್ರೀತಿ ಪಾತ್ರನಾದವನು, ಗ್ರಂಥಕರ್ತನು, ಅತಿಜಾಣನು, ಹೆಚ್ಚುಪುತ್ರರು ಮತ್ತು ಧನ-ಸಂಪತ್ತು ಉಳ್ಳವನು ಆಗುತ್ತಾನೆ.

ಲಾಭಗತೇ ಸುತನಾಥೇ ಶೂರಃ ಸುತವಾನ್ ಸುಹೃತ್ಕೃತಾ ಸಂಜ್ಞಃ ।
ಗೀತಾದಿಕಲಾಕಲಿತೋ ನೃಪಭೋಗೀ ಜಾಯತೇ ಜಾತಃ ॥

ಪಂಚಮೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಶೂರನು, ಪುತ್ರವಂತನು, ಮಿತ್ರರೊಂದಿಗೆ ಕೂಡಿರುವವನು, ಗೀತ, ಗಾಯನಾದಿ ಕಲೆ ಬಲ್ಲವನು ಮತ್ತು ರಾಜಸುಖವನ್ನು ಅನುಭವಿಸುತ್ತಾನೆ.

**ಯವನಜಾತಕ**

ಸುತಪತಿಭಜ್ಞಗಃ ಸುಖಸಂಯುತಂ ಪ್ರಕುರುತೇ ಸುತಮಿತ್ರಯುತಂ ನರಮ್ ।
ಪ್ರವರಗಾನಕಲಾಪ್ರವರಂ ವಿಭುಂ ನೃಪತಿತುಲ್ಯಕುಲಂ ಚ ಸದೈವ ಹಿ ॥

ಪಂಚಮೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಸುಖವಂತನು, ಪುತ್ರ ಮತ್ತು ಮಿತ್ರರಿಂದ ಕೂಡಿರುವವನು, ಗಾನವಿದ್ಯೆಯಲ್ಲಿ ಕುಶಲನು ಮತ್ತು ರಾಜತುಲ್ಯ ಕುಲದವನು ಆಗಿರುತ್ತಾನೆ.

ಅನುಭವದಲ್ಲಿ - ಪಂಚಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು, ಬುದ್ಧಿವಂತನು, ಗುಣವಂತನು, ಗ್ರಂಥಕರ್ತನು ಉತ್ತಮ ಸಂತಾನ ಉಳ್ಳವನು ಮತ್ತು ಸಂತಾನ ಆದ ನಂತರ ಅಭಿವೃದ್ಧಿ ಹೊಂದುತ್ತಾನೆ. ಜ್ಞಾನಪ್ರಸಾರ ಮತ್ತು ವಿದ್ಯಾದಾನ ಮಾಡುತ್ತಾನೆ ಹಾಗೂ ಗೂಢವಿದ್ಯೆ ಬಲ್ಲವನು ಆಗುತ್ತಾನೆ.

## ೬೦. ವ್ಯಯಭಾವಗತ ಪಂಚಮೇಶಫಲ

**ಪರಾಶರಹೋರಾ**

ಸುತೇಶೇ ವ್ಯಯಭಾವಸ್ಥೇ ಜಾತಃ ಪುತ್ರಸುಖೋಜ್ಝಿತಃ ।
ದತ್ತಪುತ್ರಯುತೋ ವಾಽಸೌ ಕ್ರೀತಪುತ್ರಾನ್ವಿತೋಽಥವಾ ॥

ಪಂಚಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಪುತ್ರಸುಖ ಬಿಡಲ್ಪಟ್ಟವನು, ದತ್ತಪುತ್ರನು ಉಳ್ಳವನು ಅಥವಾ ಕ್ರಯಕ್ಕೆ ಪಡೆದುಕೊಂಡ ಪುತ್ರನು ಇರುತ್ತಾನೆ.

ಮಾನಸಾಗರೀ

**ಪಂಚಮಪೇ ದ್ವಾದಶಗೇ ಕ್ರೂರೇ ಸುತರಹಿತಃ ಶುಭೇ ಸುಸುತಃ ।**
**ಸುತಸಂತಾಪಪರಃ ಸ್ಯಾದ್ವಿದೇಶಗಾಮೀ ಭವೇನ್ಮನುಜಃ ॥**

ಪಂಚಮೇಶನು ಕ್ರೂರಗ್ರಹನಾಗಿ ವ್ಯಯಭಾವದಲ್ಲಿ ಇದ್ದಾಗ ಜಾತಕನು ಸಂತಾನಹೀನನು ಆಗುತ್ತಾನೆ. ಪಂಚಮೇಶನು ಶುಭಗ್ರಹನಾಗಿ ವ್ಯಯಭಾವದಲ್ಲಿ ಇದ್ದಾಗ ಜಾತಕನು ಪುತ್ರವಂತನು, ಸಂತಾನದಿಂದ ದುಃಖಿತನು ಮತ್ತು ವಿದೇಶಸಂಚಾರ ಮಾಡುತ್ತಾನೆ.

ಯವನಜಾತಕ

**ವ್ಯಯಗತೋ ವ್ಯಯಕೃತ್ಸುತ ನಾಯಕೋ ವಿಗತಪುತ್ರಸುಖಂ ಖಚರೈಃ ಖಲೈಃ ಸುತಯುತಂ ಚ ಶುಭೈಃ ಕುರುತೇ ನರಂ, ಸ್ವಪರದೇಶಗಮಾಗಮನೋತ್ಸುಕಮ್ ॥**

ಪಂಚಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಹೆಚ್ಚು ವ್ಯಯ ಆಗುತ್ತದೆ, ಪಂಚಮೇಶನು ಕ್ರೂರಗ್ರಹನಾದರೆ ಪುತ್ರಸುಖವನ್ನು ಕಳಕೊಳ್ಳುತ್ತಾನೆ, ಪಂಚಮೇಶನು ಶುಭಗ್ರಹನಾದರೆ ಜಾತಕನು ಪುತ್ರವಂತನು ಆಗುತ್ತಾನೆ, ಸ್ವದೇಶ ಮತ್ತು ಪರದೇಶಕ್ಕೆ ಹೋಗುವ ಮತ್ತು ಬರುವ ಉತ್ಸಾಹ ಉಳ್ಳವನು ಆಗುತ್ತಾನೆ.

ಅನುಭವದಲ್ಲಿ - ಪಂಚಮೇಶನು ಶುಭಗ್ರಹನಾಗಿ ವ್ಯಯಭಾವದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು ಬುದ್ಧಿವಂತನು ಮತ್ತು ವಿದ್ಯಾದಾನ ಮಾಡುತ್ತಾನೆ, ಅಧಿಕ ಖರ್ಚು ಹಾಗೂ ದಾನ-ಧರ್ಮಾದಿ ಮಾಡುವುದರಿಂದ ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ, ತನ್ನ ಮಕ್ಕಳ ಏಳಿಗೆಗಾಗಿ ಪ್ರಯತ್ನಿಸುತ್ತಾನೆ, ಮಕ್ಕಳು ಬುದ್ಧಿವಂತರು, ವಿದ್ಯಾವಂತರು ಆಗುತ್ತಾರೆ, ಆದರೆ ತಮ್ಮ ಉದ್ಯೋಗ ನಿಮಿತ್ತ ಪರಊರಿನಲ್ಲಿ ಅಥವಾ ವಿದೇಶದಲ್ಲಿರುತ್ತಾರೆ.

ಪಂಚಮೇಶನು ಪಾಪಗ್ರಹನಾಗಿ ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಸಂತಾನನಷ್ಟ ಸಂಭವಿಸಬಹುದು, ಜಾತಕನು ಅನಾವ್ರಯ ಅಥವಾ ದುಶ್ಚಟಗಳಿಂದ ಹಾನಿಗೀಡಾಗುತ್ತಾನೆ, ಮಕ್ಕಳೊಂದಿಗೆ ವಾದ-ವಿವಾದದಿಂದ ಮಕ್ಕಳು ಹೆತ್ತವರನ್ನು ಬಿಟ್ಟು ಹೋಗುವ ಸಂಭವ ಇರುತ್ತದೆ.

# ಲಗ್ನಾದಿಭಾವಗತ ಷಷ್ಠೇಶಫಲ

## ೬೧. ಲಗ್ನಗತ ಷಷ್ಠೇಶ ಫಲ

**ಪರಾಶರಹೋರಾ**

**ಷಷ್ಠೆಶೇ ಲಗ್ನಗೇ ಜಾತೋ ರೋಗವಾನ್ ಕೀರ್ತಿಸಂಯುತಃ ।**
**ಆತ್ಮಶತ್ರುರ್ಧನೀ ಮಾನೀ ಸಾಹಸೀ ಗುಣವಾನ್ ನರಃ ॥**

ಷಷ್ಠೇಶನು ಲಗ್ನದಲ್ಲಿ ಇದ್ದಾಗ ಜಾತಕನು ರೋಗಿಯು, ಕೀರ್ತಿಗಳಿಸಿದವನು, ಸ್ವಜನರಿಗೆ ಶತ್ರುವು, ಧನವಂತನು, ಮಾನವಂತನು ಸಾಹಸವಂತನು ಮತ್ತು ಗುಣವಂತನು ಆಗುತ್ತಾನೆ.

**ಮಾನಸಾಗರೀ**

**ಷಷ್ಠೇಶೋ ಲಗ್ನಗತೋ ನೀರುಕ್ಸಬಲಃ ಕುಟುಂಬಕಷ್ಟಕರಃ ।**
**ಬಹುಪಕ್ಷೋ ರಿಪುಹಂತಾ ಬವತಿ ನರಃ ಸ್ವೈರವಚನಧನಃ ॥**

ಷಷ್ಠೇಶನು ಲಗ್ನದಲ್ಲಿ ಇದ್ದಾಗ ಜಾತಕನು ರೋಗರಹಿತನು, ಬಲಿಷ್ಠನು, ಕುಟುಂಬೀಯರಿಗೆ ಕಷ್ಟದಾಯಕನು, ಬಹುಪಕ್ಷೀಯನು, ಶತ್ರುವಿನನಾಶ ಮಾಡುವವನು, ಸ್ವತಂತ್ರನು, ತನ್ನಮಾತಿನಧನಿ (ಮಾತಿನ ದೃಢತೆ ಉಳ್ಳವನು) ಆಗುತ್ತಾನೆ.

**ಯವನಜಾತಕ**

**ರಿಪುಪತೌ ರಿಪುಹಾ ತನುಗೇಯದಾ ವಿಗತವೈರಭಯಃ ಸಬಲಃ ಸದಾ ।**
**ಸ್ವಜನಕಷ್ಟಪ್ರದಶ್ಚ ಪುಮಾನ್ಸದಾ ಬಹುಚತುಷ್ಪದವಾಹನ ಭೋಗವಾನ್ ॥**

ಷಷ್ಠೇಶನು ಲಗ್ನದಲ್ಲಿ ಇದ್ದಾಗ ಜಾತಕನು ಶತ್ರುನಾಶ ಮಾಡುವವನು, ವೈರತ್ವ ಮತ್ತು ಭಯಹೀನನು, ಬಲಿಷ್ಠನು, ಸ್ವಜನರಿಗೆ ಕಷ್ಟದಾಯಕನು, ಹೆಚ್ಚು ಪಶುಗಳು ಉಳ್ಳವನು ಮತ್ತು ವಾಹನಭೋಗ ಅನುಭವಿಸುತ್ತಾನೆ.

ಅನುಭವದಲ್ಲಿ- ಷಷ್ಠೇಶನು ಲಗ್ನದಲ್ಲಿ ಇದ್ದಾಗ ಜಾತಕನು ಹಠತನ ಉಳ್ಳವನು, ಪರರನ್ನು ದೂಷಿಸುವವನು, ಮಾನಸಿಕಚಿಂತೆ ಮತ್ತು ದೈಹಿಕ ಆಯಾಸ ಇರುತ್ತದೆ, ಕುಟುಂಬೀಯರೊಂದಿಗೆ ವಾದ-ವಿವಾದ ಸಂಭವಿಸುತ್ತದೆ.

# ೬೨. ದ್ವಿತೀಯಭಾವಗತ ಷಷ್ಠೇಶಫಲ

**ಪರಾಶರಹೋರಾ**

**ಷಷ್ಠೇಶೇ ಧನಭಾವಸ್ಥೇ ಸಾಹಸೀ ಕುಲವಿಶ್ರುತಃ ।**
**ಪರದೇಶೀ ಸುಖೀ ವಕ್ತಾ ಸ್ವಕರ್ಮನಿರತಃ ಸದಾ ॥**

ಷಷ್ಠೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಸಾಹಸಿಗನು, ತನ್ನಕುಲದಲ್ಲಿ ವಿಖ್ಯಾತನು, ಪರದೇಶವಾಸ ಮಾಡುವವನು, ಸುಖವಂತನು, ವಿದ್ಯಾವಂತನು, ಕಪಟವಿಲ್ಲದವನು, ವಾಗ್ಮಿಯು, ಮತ್ತು ಯಾವಗಲೂ ತನ್ನ ಕಾರ್ಯ-ಕಲಾಪಗಳಲ್ಲಿ ನಿರತನು ಆಗುತ್ತಾನೆ.

**ಮಾನಸಾಗರೀ**

**ಶತ್ರುಪತೌ ದ್ರವಿಣಸ್ಥೇ ದುಷ್ಟಶ್ಚತುರೋ ಹಿ ಸಂಗ್ರಹಪರೇಷ್ಟಃ ।**
**ಸ್ಥಾನಪ್ರವರೋ ವಿದಿತೋ ವ್ಯಾಧಿತತನುಃ ಸುಹೃದ್ಧನಹಾ ॥**

ಷಷ್ಠೇಶನು ದ್ವಿತೀಯ ಭಾವದಲ್ಲಿ ಇದ್ದಾಗ ಜಾತಕನು ದುಷ್ಟನು, ಚತುರನು, ಸಂಗ್ರಹತತ್ಪರನು, ತನ್ನ ವಂಶ ಅಥವಾ ಪಂಗಡದಲ್ಲಿ ಶ್ರೇಷ್ಠನು, ಪ್ರಖ್ಯಾತನು, ರೋಗಪೀಡಿತ ದೇಹ ಮತ್ತು ಮಿತ್ರಧನವನ್ನು ನಷ್ಟಗೊಳಿಸಿದವನು ಆಗುತ್ತಾನೆ.

**ಯವನಜಾತಕ**

**ರಿಪುಪತೌ ದ್ರವಿಣೇ ಚತುರೋ ನರಃ ಕಠಿನತಾಧನಸಂಗ್ರಹಣೇ ಕ್ಷಮಃ ।**
**ನಿಜಪದಪ್ರವರೋ ವಿದಿತಶ್ಚಲೋ ಗದಯುತಃ ಕೃಶಗಾತ್ರಯುತೋ ನರಃ ॥**

ಷಷ್ಠೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಚತುರನು, ನಿರ್ದಯತೆಯಿಂದ ಧನಸಂಗ್ರಹಿಸುವುದರಲ್ಲಿ ಸಮರ್ಥನು, ತನ್ನ ವ್ಯವಸಾಯ ಅಥವಾ ಉದ್ಯೋಗ ಕ್ಷೇತ್ರದಲ್ಲಿ ಶ್ರೇಷ್ಠನು, ರೋಗದಿಂದ ಕೂಡಿದವನು ಮತ್ತು ಕೃಶವಾದ ದೇಹದವನು ಆಗುತ್ತಾನೆ.

ಅನುಭವದಲ್ಲಿ - ಷಷ್ಠೇಶನು ಲಗ್ನದಲ್ಲಿ ಇದ್ದಾಗ ಜಾತಕನ ಮಾತಿನಲ್ಲಿ ತೀಕ್ಷ್ಣತೆ ಇರುತ್ತದೆ ಮತ್ತು ತನ್ನ ವಾದವನ್ನು ಸಮರ್ಥಿಸುತ್ತಾನೆ, ಕುಟುಂಬ

ಕಲಹ ಇರುತ್ತದೆ, ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ, ಕೋರ್ಟು ವ್ಯವಹಾರ ಸಂಭವಿಸುತ್ತದೆ, ಜ್ಯಾಮೀನು ವ್ಯವಹಾರದಿಂದ ಹಾನಿಗೀಡಾಗುತ್ತಾರೆ.

## ೬೩. ತೃತೀಯಭಾವಗತ ಷಷ್ಠೇಶಫಲ

ಪರಾಶರಹೋರಾ

ಷಷ್ಠೇಶೇ ಸಹಜಃ ಜಾತಃ ಕ್ರೋಧೀ ವಿಕ್ರಮವರ್ಜಿತಃ ।
ಭ್ರಾತಾ ಶತ್ರುಸಮಸ್ತಸ್ಯ ಭೃತ್ಯಶ್ಚೋತ್ತರದಾಯಕಃ ॥

ಷಷ್ಠೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಕೋಪಿಷ್ಠನು, ಪರಾಕ್ರಮ ಬಿಟ್ಟವನು, ಸಹೋದರರು ಜಾತಕನಿಗೆ ಶತ್ರುಸಮಾನರು ಮತ್ತು ಅವಿಶ್ವಾಸಿ ನೌಕರರು ಇರುತ್ತಾರೆ.

ಮಾನಸಾಗರೀ

ಷಷ್ಠಪತಿಃ ಸಹಜಸ್ಥಃ ಕುರುತೇ ತಂ ಲೋಕಕಷ್ಟಕರಮ್ ।
ನಿಜಜನಮಾರಣ ಚತುರಂ ಕಷ್ಟಂ ಸಂಗ್ರಾಮತಸ್ತಸ್ಯ ॥

ಷಷ್ಠೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಜನರಿಗೆ ಕಷ್ಟದಾಯಕನು, ಸ್ವಜನರನ್ನೇ ಹೊಡೆಯುವವನು, ಚತುರನು ಮತ್ತು ಯುದ್ಧದಲ್ಲಿ ಕಷ್ಟಹೊಂದುತ್ತಾನೆ.

ಯವನಜಾತಕ

ಸಹಜಗೇ ರಿಪುಭಾವಪತೌ ಕ್ಷಮೀ ಕಲರತಃ ಕುರುತೇ ಬಹುಕರ್ಮಕಃ ।
ಪಿತೃಭುಜಾಪ್ತಧನವ್ಯಯಕಾರಕೋ ಬಹುಲಕೋಪಧರಃ ಸಹಜೋಜ್ಝಿತಃ ॥

ಷಷ್ಠೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಕ್ಷಮಾ ಗುಣಉಳ್ಳವನು, ದುಷ್ಟಜನರ ಸಹವಾಸ ಉಳ್ಳವನು, ತುಂಬಾ ಕಾರ್ಯ-ಕಲಾಪಗಳನ್ನು ನೆರವೇರಿಸುತ್ತಾನೆ, ತಂದೆಯು ಸಂಪಾದಿಸಿದ ಧನವನ್ನು ಖರ್ಚುಮಾಡುತ್ತಾನೆ, ಮಹಾ ಕೋಪಿಷ್ಠನು ಮತ್ತು ಸಹೋದರರಿಂದ ಬಿಡಲ್ಪಟ್ಟವನು ಆಗಿರುತ್ತಾನೆ.

ಅನುಭವದಲ್ಲಿ - ಷಷ್ಠೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ತನ್ನ ಸಹೋದರರೊಂದಿಗೆ ಕಲಹ, ಶತ್ರುತ್ವ ಇರುತ್ತದೆ, ಪಿತ್ರಾರ್ಜಿತ ಸಂಪತ್ತಿನ ವ್ಯಯ ಸಂಭವಿಸುತ್ತದೆ, ಧನವಂತನು, ಸ್ವಾಭಿಮಾನ ಉಳ್ಳವನು, ಕೋಪಿಷ್ಠನು ಮತ್ತು ದುಷ್ಟ ಜನರ ಸಹವಾಸ ಉಳ್ಳವನು ಆಗುತ್ತಾನೆ.

## ೬೪. ಚತುರ್ಥಭಾವಗತ ಷಷ್ಠೇಶಫಲ

**ಪರಾಶರಹೋರಾ**

**ಷಷ್ಠೇಶೇ ಸುಖಭಾವಸ್ಥೇ ಮಾತುಃ ಸುಖವಿವರ್ಜಿತಃ ।**
**ಮನಸ್ವೀ ಪಿಶುನಾ ದ್ವೇಷೀ ಚಲಚಿತ್ತೋಽತಿ ವಿತ್ತವಾನ್ ॥**

ಷಷ್ಠೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮಾತೃಸುಖ ಇಲ್ಲದವನು, ಮನಸ್ಸಿಗೆ ಸರಿಕಂಡಂತೆ ಮಾಡುತ್ತಾನೆ, ದುರ್ಜನನು, ಚಾಡಿಕೋರನು, ದ್ವೇಷಭಾವನೆ, ಚಂಚಲತೆ ಉಳ್ಳವನು ಮತ್ತು ಅತಿಧನವಂತನು ಆಗುತ್ತಾನೆ.

**ಮಾನಸಾಗರಿ**

**ಷಷ್ಠಾಧಿಪತಿಸ್ತುರ್ಯೇ ಪಿತೃತನಯೌ ವೈರಿಣೋ ಮಿಥಃ ಕುರುತೇ ।**
**ಸರುಕ್ ಪಿತಾ ಸೋಽಥ ಸುತೋ ಲಕ್ಷ್ಮೀ ಲಭತೇ ನರಃ ಸುಚಿರಮ್ ॥**

ಷಷ್ಠೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನ ತಂದೆ-ಮಗನಲ್ಲಿ ಪರಸ್ಪರ ವೈರತ್ವ ಇರುತ್ತದೆ; ತಂದೆಯು ರೋಗಿಯು ಆಗುತ್ತಾನೆ. ಜಾತಕನ ತಂದೆ ಮತ್ತು ಜಾತಕನಿಗೆ ದೀರ್ಘಕಾಲದ ವರೆಗೆ ಧನಲಾಭ ಆಗುತ್ತದೆ.

**ಯವನಜಾತಕ**

**ಸುಖಗತೇರಿಪತೌ ಪಿತೃಪಕ್ಷಪಃ ಕಲಹವಾನ್ನೃಪುಷಾ ಚ ರುಜಾನ್ವಿತಃ ।**
**ತದನು ತಾತಧನೇನ ಯುತೋ ಬಲೀ ಜನನೀ ಸೌಖ್ಯಯುತಶ್ಚಪಲಃ ಸ್ಮೃತಃ ॥**

ಷಷ್ಠೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆಯ ಪಕ್ಷದವರನ್ನು ಸಾಕುತ್ತಾನೆ, ಕಲಹಪ್ರಿಯನು, ರೋಗದಿಂದ ಪೀಡಿತನು, ತಂದೆಯ ಧನದಿಂದ ಕೂಡಿದವನು, ಬಲಿಷ್ಠನು, ಮಾತೃಸುಖ ಉಳ್ಳವನು, ಮತ್ತು ಚಂಚಲ ಸ್ವಭಾವದವನು ಆಗುತ್ತಾನೆ.

ಅನುಭವದಲ್ಲಿ - ಷಷ್ಠೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ಸ್ವಜನರೊಂದಿಗೆ ದ್ವೇಷಭಾವನೆ ಇರುತ್ತದೆ, ಜಾತಕನು ಧನವಂತನು, ಮಾತ್ರ ಸುಖಉಳ್ಳವನು, ತಾಯಿಯ ಆರೋಗ್ಯ ತೃಪ್ತಿಕರವಲ್ಲ, ಗೃಹದಲ್ಲಿ ಅಶಾಂತಿ, ಭೂವಿವಾದ, ವಾಹನದಿಂದ ಹಾನಿ ಅಥವಾ ನಷ್ಟ, ಸಾಲಕೊಟ್ಟಹಣ ವಸೂಲಿ ಆಗುವುದು ಸಂದೇಹಕರ ಆಗಿರುತ್ತದೆ.

## ೬೫. ಪಂಚಮಭಾವಗತ ಷಷ್ಠೇಶಫಲ

**ಪರಾಶರಹೋರಾ**

ಷಷ್ಠೇಶಃ ಸುತಗೋಯಸ್ಯ ಚಲಂ ತಸ್ಯ ಧನಾದಿಕಮ್ ।
ಶತ್ರುತಾ ಪುತ್ರಮಿತ್ರೈಶ್ಚ ಸುಖೀ ಸ್ವಾರ್ಥೀ ದಯಾನ್ವಿತಃ ॥

ಷಷ್ಠೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಧನ-ಸಂಪತ್ತಿನ ಏರಿಳಿತ ಸಂಭವಿಸುತ್ತದೆ, ಪುತ್ರರು ಮತ್ತು ಮಿತ್ರರೊಂದಿಗೆ ಶತ್ರುತ್ವ ಇರುತ್ತದೆ, ಜಾತಕನು ಸುಖವಂತನು, ಸ್ವಾರ್ಥಿಯು ಮತ್ತು ದಯಾವಂತನು ಆಗುತ್ತಾನೆ.

**ಮಾನಸಾಗರೀ**

ರಿಪುಭವನಪತೌ ಸುತಗೇ ಪಿತೃತನಯೌ ವೈರಿಣೌ ಮೃತಿಃ ಸುತತಃ ।
ಕ್ರೂರೇ ಶುಭೇ ಚ ವಿಧನಃ ಪದವೀದುಷ್ಟಶ್ಚ ತತ್ಕಪಟೀ ॥

ಷಷ್ಠೇಶನು ಕ್ರೂರಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ತಂದೆ ಮತ್ತು ಪುತ್ರನಲ್ಲಿ ವೈರತ್ವ ಆಗುತ್ತದೆ. ಹಾಗೂ ಮಗನಿಂದ ತಂದೆಯ ಮರಣ ಆಗುತ್ತದೆ.

ಷಷ್ಠೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನು ಧನವನ್ನು ಕಳಕೊಳ್ಳುತ್ತಾನೆ, ದುಷ್ಟನೆಂದು ಪದವಿ ಮತ್ತು ಕಪಟಿಯು ಆಗುತ್ತಾನೆ.

**ಯವನಜಾತಕ**

ರಿಪುಪತೌ ತನಯಸ್ಥಲಗೇ ಭವೇತ್ಪಿತೃಸುತಾದ್ಕತಿ ವಾದಕರಃ ಪ್ರಿಯಃ ।
ಮೃತಸುತಶ್ಚ ಖಲಗ್ರಹಯೋಗತಃ ಶುಭಯುತೋಪಿ ಧನಾದ್ಚ್ಯುತ ಏವ ಸಃ ॥

ಷಷ್ಠೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನ ತಂದೆಯು ಮಕ್ಕಳೊಂದಿಗೆ ವಿವಾದ ಮಾಡುತ್ತಾನೆ, ಷಷ್ಠೇಶನು ಕ್ರೂರಗ್ರಹನಾಗಿದ್ದರೆ

ಮೃತಸಂತಾನ ಜನಿಸುತ್ತದೆ, ಷಷ್ಠೇಶನು ಶುಭಗ್ರಹನಾಗಿ ಇದ್ದರೆ ಜಾತಕನಿಗೆ ಅದ್ಭುತವಾಗಿ ಧನ-ಸಂಪತ್ತು ಲಭಿಸುತ್ತದೆ.

ಅನುಭವದಲ್ಲಿ - ಷಷ್ಠೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಬದ್ಧಿವಂತನು ಆದರೆ ಹಠತನ ಉಳ್ಳವನು ಮತ್ತು ತನ್ನವಾದವನ್ನು ಸಮರ್ಥಿಸುವವನು ಆಗಿರುತ್ತಾನೆ, ಧನ-ಸಂಪತ್ತಿನ ಏರಿಳಿತ ಇರುತ್ತದೆ, ಮಕ್ಕಳೊಂದಿಗೆ ಜಗಳ-ಕಲಹ ಇರುತ್ತದೆ, ಪಂಚಮ ಭಾವಸ್ಥಿತ ಷಷ್ಠೇಶನು ಪಾಪಗ್ರಹನಾದರೆ ಮಕ್ಕಳಲ್ಲಿ ಅಂಗವಿಕಲತೆ ಇರಬಹುದು.

## ೬೬. ಷಷ್ಠಭಾವಗತ ಷಷ್ಠೇಶಫಲ

**ಪರಾಶರಹೋರಾ**

> ಷಷ್ಠೇಶೇ ರಿಪುಭಾವಸ್ಥೇ ವೈರಂ ಸ್ವಜ್ಞಾತಿಮಂಡಲಾತ್ ।
> ಅನ್ಯೈ ಸಹ ಭವೇತ್ ಮೈತ್ರೀ ಸುಖಂ ಮಧ್ಯಂ ಧನಾದಿಕಮ್ ॥

ಷಷ್ಠೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಸಂಭಂಧಿಕರೊಂದಿಗೆ ವೈರತ್ವ, ಇತರರೊಂದಿಗೆ ಮಿತ್ರತ್ವ ಮತ್ತು ಮಧ್ಯಮವಾಗಿ ಧನ-ಸಂಪತ್ತಿನ ಸುಖ ಲಭಿಸುತ್ತದೆ.

**ಮಾನಸಾಗರೀ**

> ರಿಪುಭವನೇಶರಿಪುಸ್ಥೇ ನಿರುಗ್ವೈರೀ ಸುಖೀ ಕೃಪಣಃ ।
> ನಹಿ ಜನ್ಮತೋಽಪಿ ಸೀದತಿ ಕುಸ್ಥಾನವಾಸೀ ನರೋ ಭವತೀ ॥

ಷಷ್ಠೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ರೋಗರಹಿತನು, ವೈರಿಗಳು ಉಳ್ಳವನು, ಸುಖವಂತನು, ಕೃಪಣನು, ಜನನಕಾಲದಿಂದ ದುಃಖವಿಲ್ಲದವನು ಮತ್ತು ಕೆಟ್ಟಸ್ಥಾನ(ಸ್ಥಳ)ದಲ್ಲಿ ವಾಸಿಸುತ್ತಾನೆ.

**ಯವನಜಾತಕ**

> ನಿಜಗೃಹೇ ರಿಪುಭಾವಪತೌ ನರೋ ರಿಪುಗತಃ ಕೃಪಣಶ್ಚ ಖಲೋಜ್ಝಿತಃ ।
> ಸತು ನಿಜಸ್ಥಲಲಬ್ಧಸುಖಃ ಸದಾ ಭವತಿ ಜನ್ಮರತಃ ಪಶುಯೋಷಿತಃ ॥

ಷಷ್ಠೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಪಕ್ಷದವರೊಂದಿಗೆ ಇರುತ್ತಾನೆ, ಕೃಪಣನು ಮತ್ತು ದುಷ್ಟಜನರಿಂದ ತ್ಯಜಿಸಲ್ಪಡುತ್ತಾನೆ, ತನ್ನ

ಅಥವಾ ತಾನಿರುವ ಸ್ಥಳದಲ್ಲಿ ಯಾವಾಗಲೂ ಸುಖ ಪಡೆಯುತ್ತಾನೆ, ಪಶು ಮತ್ತು ಸ್ತ್ರೀ ಪಾಲನೆಯಲ್ಲಿ ಅನುರಕ್ತನು ಆಗಿರುತ್ತಾನೆ.

ಅನುಭವದಲ್ಲಿ - ಷಷ್ಠೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ರೋಗರಹಿತನು, ಕೃಪಣನು, ಸ್ತ್ರೀಯರಿಗೆ ಆಶ್ರಯಕ್ಕೆ ಸಹಾಯಕನು, ಲೋಭಿಯು, ಸುಖಿವಂತನು, ಶತ್ರುಬಾಧೆ ಇರುತ್ತದೆ, ಪರಠನ ಉಳ್ಳವನು ಮತ್ತು ಕೋರ್ಟು ವ್ಯವಹಾರದಲ್ಲಿ ಜಯಗಳಿಸುತ್ತಾನೆ, ಜೀವನದಲ್ಲಿ ಹಲವಾರು ಸಂಕಷ್ಟಗಳನ್ನು ಎದುರಿಸಿ ಸತತ ಪ್ರಯತ್ನದಿಂದ ಅಭಿವೃದ್ಧಿ ಹೊಂದುತ್ತಾನೆ.

## ೬೭. ಸಪ್ತಮಭಾವಗತ ಷಷ್ಠೇಶಫಲ

**ಪರಾಶರಹೋರಾ**

**ಷಷ್ಠೇಶೇ ದಾರಭಾವಸ್ಥೇ ಜಾತೋ ದಾರಸುಖೋಜ್ಝಿತಃ ।**
**ಕೀರ್ತಿಮಾನ್ ಗುಣವಾನ್ ಮಾನೀ ಸಾಹಸೀ ಧನಸಂಯುತಃ ॥**

ಷಷ್ಠೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಪತ್ನಿಸುಖದಿಂದ ವಂಚಿತನು ಅಥವಾ ತ್ಯಜಿಸಲ್ಪಟ್ಟವನು, ಕೀರ್ತಿವಂತನು, ಗುಣವಂತನು, ಮಾನವಂತನು, ಸಾಹಸಿಗನು ಮತ್ತು ಧನಕೂಡಿಸುತ್ತಾನೆ.

**ಮಾನಸಾಗರೀ**

**ಅಹಿತಪತೌ ಸಪ್ತಮಗೇ ಕ್ರೂರೇ ಭಾರ್ಯಾ ವಿರೋಧಿನೀ ಚಂಡೀ ।**
**ತಾಪಕರೋ ತ್ವಥ ಸೌಮ್ಯೇ ವಂಧ್ಯಾ ವಾ ಗರ್ಭನಾಶಪರಾ ॥**

ಷಷ್ಠೇಶನು ಕ್ರೂರಗ್ರಹನಾಗಿ ಸಪ್ತಮಭಾವದಲ್ಲಿ ಇದ್ದಾಗ ಜಾತಕನನ್ನು ಪತ್ನಿಯು ವಿರೋಧಿಸುತ್ತಾಳೆ, ಉಗ್ರಸ್ವಭಾವದವಳು ಮತ್ತು ಕಷ್ಟದಾಯಕಳು ಆಗುತ್ತಾಳೆ, ಷಷ್ಠೇಶನು ಶುಭಗ್ರಹನಾಗಿ ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಬಂಜೆಯು, ಅಥವಾ ಗರ್ಭಪಾತ ಆಗುತ್ತದೆ ಅಥವಾ ಮೃತ ಸಂತಾನ ಹೆರುತ್ತಾಳೆ.

**ಯವನಜಾತಕ**

**ಅರಿಪತೌ ಮದನೇ ಖಲಸಂಯುತೇ ಪ್ರವರಕಾಮುಭರಾವನಿತಾಯುತಃ ।**
**ಬಹಲವಾದಕರೋ ವಿಷಸೇವಕಃ ಶುಭಖಗೈರ್ಬಹುಲಾಭಸುತಾನ್ವಿತಃ ॥**

ಷಷ್ಠೇಶನು ಸಪ್ತಮಭಾವದಲ್ಲಿ ಕ್ರೂರಗ್ರಹನ ಯುತಿಯಲ್ಲಿ ಇದ್ದಾಗ ಜಾತಕನು ಅತಿಕಾಮಿಯಾದ ಸ್ತ್ರೀಯಿಂದ ಕೂಡಿರುತ್ತಾನೆ, ಅತಿಶಯವಾಗಿ ವಾದ-ವಿವಾದ ಮಾಡುವವನು, ವಿಷಸೇವನೆ ಮಾಡುತ್ತಾನೆ, ಷಷ್ಠಾಧಿಪತಿಯು ಶುಭಗ್ರಹನಾದರೆ ಜಾತಕನಿಗೆ ಹೇರಳಲಾಭ ಮತ್ತು ಪುತ್ರರಿಂದ ಕೂಡಿರುತ್ತಾನೆ.

ಅನುಭವದಲ್ಲಿ - ಷಷ್ಠೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯ ಆರೋಗ್ಯ ಉತ್ತಮ ಆಗಿರುವುದಿಲ್ಲ, ದಾಂಪತ್ಯ ಸುಖ ತೃಪ್ತಿಕರವಲ್ಲ, ಯಾವಾಗಲೂ ದಂಪತಿಗಳಲ್ಲಿ ವಾದ-ವಿವಾದ ಇರುತ್ತದೆ, ಜಾತಕನು ಸಂಘ-ಸಂಸ್ಥೆಗಳ ಆಡಳಿತಾಧಿಕಾರಿಯಾಗಿ ಉತ್ತಮವಾಗಿ ಕಾರ್ಯಕಲಾಪಗಳನ್ನು ನೆರವೇರಿಸಿ ಸಂಸ್ಥೆಯ ಅಭಿವೃದ್ಧಿಗೆ ಸಹಾಯಕನು ಆಗುತ್ತಾನೆ.

## ೭೮. ಅಷ್ಟಮಭಾವಗತ ಷಷ್ಠೇಶಫಲ

ಪರಾಶರಹೋರಾ

> ಷಷ್ಠೇಶೇಽಷ್ಟಮಗೇ ಜಾತೋ ರೋಗೀ ಶತ್ರುರ್ಮನೀಷಿಣಾಮ್ ।
> ಪರದ್ರವ್ಯಾಭಿಲಾಷಿ ಚ ಪರದಾರರತೋಽಶುಚಿಃ ॥

ಷಷ್ಠೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ರೋಗಿಯು, ಪಂಡಿತರಿಗೆ ವೈರಿಯು, ಪರದ್ರವ್ಯದಲ್ಲಿ ಅಭಿಲಾಷೆ ಉಳ್ಳವನು ಮತ್ತು ಪರಸ್ತ್ರೀರತನು ಆಗುತ್ತಾನೆ.

ಮಾನಸಾಗರೀ

> ಶನೇಗ್ರಹಣಿಕಾರುಜಾ ವಿಷಧರಾದ್ಧ ರಾನಂದನಾದ ಬುಧಾಚ್ಚ ವಿಷದೋಷತಃ
> ಸಪದಿ ಮೃತ್ಯುರಣಾಂಕತಃ ।
> ರವೇರ್ಮೃಗಪತೇವಧಾತ್ತ್ರಕಟಮಷ್ಟಮೇ ಷಷ್ಠಪಾದ್ ಗುರೋರಪಿ ಚ
> ದುಷ್ಟಧೀನಯನದೋಷವಾಂಛುಕ್ರತಃ ॥

ಅಷ್ಟಮಭಾವದಲ್ಲಿ ಇರುವ ಷಷ್ಠೇಶನು 1. ಶನಿಯಾದರೆ ಜಾತಕನು ಗ್ರಹಣೀರೋಗದಿಂದ, 2. ಷಷ್ಠೇಶನು ಕುಜನಾದರೆ ವಿಷಜಂತುಗಳ ಕಡಿತದಿಂದ, 3. ಷಷ್ಠೇಶನು ಬುಧನಾದರೆ ವಿಷಪ್ರಯೋಗದಿಂದ, 4. ಷಷ್ಠೇಶನು ಚಂದ್ರನಾದರೆ

ಶೀಘ್ರವಾಗಿ ಅಥವಾ ಆಕಸ್ಮಿಕವಾಗಿ ಹೃದಯ ಸ್ತಂಭನದಿಂದ ಮರಣ ಸಂಭವಿಸುತ್ತದೆ, 5. ಷಷ್ಠೇಶನು ಸೂರ್ಯನಾದರೆ ಸಿಂಹಾದಿ ಕ್ರೂರಮೃಗಗಳಿಂದ, 6. ಷಷ್ಠೇಶನು ಗುರುವಾದರೆ ದುಷ್ಟಬುದ್ಧಿಯವರಿಂದ (ಕಳ್ಳ, ದರೋಡೆಕೋರ,) ಜಾತಕನ ಅವಸಾನ ಆಗುತ್ತದೆ. 7. ಷಷ್ಠೇಶ ಶುಕ್ರನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕಣ್ಣಿನರೋಗಿ ಆಗುತ್ತಾನೆ.

**ಯವನಜಾತಕ**

> **ಗ್ರಹಣೆರುಗ್ರಿಪುನಾಥಯುತೇಽಷ್ಟಮೇ ವಿಷಧರಾನ್ಮರಣಂ ವಿಷತೋ ವಧಃ ।**
> **ಮರಣದೋ ವಿಧುರೇವ ರವಿನೃಪಾದ್ಗುರುಸಿತೌ ನಯನೇಷು ವಿಪತ್ಪ್ರದೌ ॥**

ಷಷ್ಠೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಗ್ರಹಣೀರೋಗ, ಸರ್ಪ ಅಥವಾ ವಿಷದಿಂದ ಮರಣಹೊಂದುತ್ತಾನೆ, ಅಷ್ಟಮಭಾವಸ್ಥಿತ ಷಷ್ಠೇಶನು ಚಂದ್ರ ಅಥವಾ ರವಿಯಾದರೆ ಜಾತಕನಿಗೆ ರಾಜನಿಂದ ಮರಣ ಸಂಭವಿಸುತ್ತದೆ, ಅಷ್ಟಮಭಾವಸ್ಥಿತ ಷಷ್ಠೇಶನು ಗುರು ಅಥವಾ ಶುಕ್ರನಾದರೆ ಜಾತಕನಿಗೆ ಕಣ್ಣಿನ ಪೀಡೆ ಇರುತ್ತದೆ.

ಅನುಭವದಲ್ಲಿ - ಷಷ್ಠೇಶನು ಅಷ್ಟಮಭಾವದಲ್ಲಿ ಇದ್ದರೆ ಅದನ್ನು ವಿಪರೀತ ರಾಜಯೋಗ ಎನ್ನುತ್ತಾರೆ, (ಒಬ್ಬ ದುಸ್ಥಾನಾಧಿಪತಿಯು ಇನ್ನೊಂದು ದುಸ್ಥಾನದಲ್ಲಿ ಇದ್ದರೆ ಅದು ವಿಪರೀತ ರಾಜಯೋಗ ಆಗುತ್ತದೆ,) ಈ ಯೋಗದಲ್ಲಿ ಜನಿಸಿದ ಜಾತಕನು, ಬುದ್ಧಿವಂತಿಕೆ, ಚತುರತೆ ಅಥವಾ ವಂಚನೆಯಿಂದ ಧನ-ಸಂಪತ್ತನ್ನು ಗಳಿಸುತ್ತಾನೆ, ಆಕಸ್ಮಾತ್ ಅಪಘಾತ ಅಥವಾ ಕ್ಲಿಷ್ಟಕರವಾದ ವ್ಯಾಧಿಯಿಂದ ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತದೆ, ತಮಗೆ ಹಾನಿಮಾಡಿದವರಿಗೆ ಸೇಡುತೀರಿಸಲು ಪ್ರಯತ್ನಿಸಿ ನಷ್ಟಕ್ಕೀಡಾಗುತ್ತಾರೆ.

ಅನುಭವದಲ್ಲಿ - ಮೇಷಲಗ್ನದವರಿಗೆ ತೃತೀಯ ಷಷ್ಠಾಧಿಪತಿ ಬುಧನು ಸಪ್ತಮಭಾವವಾದ ತುಲಾರಾಶಿಯಲ್ಲಿರುವಾಗ ದಾಂಪತ್ಯ ಸುಖಕ್ಕೆ ತೊಡಕನ್ನು ಉಂಟು ಮಾಡುತ್ತಾನೆ, ಪತ್ನಿಯು ಸಿಡುಕು ಸ್ವಭಾವದವಳು ಮತ್ತು ಅವಳಲ್ಲಿ ವಾದ-ವಿವಾದ ಪ್ರವೃತ್ತಿ ಇರುತ್ತದೆ, ಇದರಿಂದಾಗಿ ಅವಳ ಆರೋಗ್ಯದ ಮೇಲೆ ಅಲ್ಪ-ಸ್ವಲ್ಪ ಪರಿಣಾಮ ಆಗುತ್ತದೆ, ಜಾತಕನು ವ್ಯಾಪಾರ ವ್ಯವಹಾರದಲ್ಲಿ ಕುಶಲನು ಆದರೆ ತನ್ನ ವಾದವನ್ನೇ ಸಮರ್ಥಿಸುವವನು ಆಗಿರುವುದರಿಂದ ವ್ಯಾಪಾರದಲ್ಲಿ ಕೆಲವೊಮ್ಮೆ ಗಿರಾಕಿಗಳನ್ನು ಕಳಕೊಳ್ಳುತ್ತಾನೆ.

ವೃಷಭಲಗ್ನದಲ್ಲಿ ಜನಿಸಿದವರಿಗೆ ಷಷ್ಠಾಧಿಪತಿ ಶುಕ್ರನೇ ಲಗ್ನಾಧಿಪತಿ ಆಗಿರುತ್ತಾನೆ, ಇವನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಗುಣವಂತಳು, ಬುದ್ಧಿವಂತಳು, ವಿದ್ಯಾವಂತಳು ಆದ ಪತ್ನಿಯನ್ನು ಪಡೆಯುತ್ತಾನೆ, ಆದರೆ ದಾಂಪತ್ಯಸುಖ ತೃಪ್ತಿಕರವಲ್ಲ, ದಂಪತಿಗಳಲ್ಲಿ ಅನ್ಯೋನ್ಯತೆ ಇರುತ್ತದೆ, ಆದರೆ ತಾತ್ಕಾಲಿಕವಾಗಿ ಆಗಾಗ್ಗೆ ವಾದ-ವಿವಾದ ಇರುತ್ತದೆ, ವಾಲುವ್ಯಾಪಾರದಲ್ಲಿ ಜಾತಕನಿಗೆ ಹಾನಿ ಉಂಟಾಗುತ್ತದೆ. ಶುಕ್ರನು ದೂಷಿತನಾದರೆ ದ್ವಿಭಾರ್ಯಾಯೋಗ ಸಂಭವಿಸುತ್ತದೆ.

ಮಿಥುನಲಗ್ನದಲ್ಲಿ ಜನಿಸಿದವರಿಗೆ ಷಷ್ಠ-ಲಾಭಾಧಿಪತಿ ಕುಜನು ಸಪ್ತಮಭಾವವಾದ ಗುರುಕ್ಷೇತ್ರದಲ್ಲಿ ಇದ್ದಾಗ ಜಾತಕನ ಪತ್ನಿಯು ಉತ್ತಮಗುಣವಂತಳು, ತೀಕ್ಷ್ಣ ಸ್ವಭಾವ ಮತ್ತು ತನ್ನವಾದವನ್ನು ಸಮರ್ಥಿಸುವ ಹಠತನ ಉಳ್ಳವಳು, ದಂಪತಿಗಳಲ್ಲಿ ಆಗಾಗ್ಗೆ ಚರ್ಚೆ, ಜಗಳ ಇರುತ್ತದೆ, ವಿವಾಹದನಂತರ ಅಭಿವೃದ್ಧಿ ಆಗುತ್ತದೆ, ಸಂತಾನನಷ್ಟ ಸಂಭವಿಸಬಹುದು, ವಿದ್ಯಾಸಂಸ್ಥೆ ಅಥವಾ ಆರ್ಥಿಕ ಸಂಸ್ಥೆಗಳ ಆಡಳಿತ ಅಧಿಕಾರಿಗಳು ಆಗುತ್ತಾರೆ.

ಕರ್ಕಟಕಲಗ್ನದಲ್ಲಿ ಜನಿಸಿದವರಿಗೆ ಷಷ್ಠ-ಭಾಗ್ಯಾಧಿಪತಿ ಗುರುವು ಸಪ್ತಮಭಾವವಾದ ಮಕರರಾಶಿ (ಗುರುವಿನ ನೀಚಕ್ಷೇತ್ರ)ಯಲ್ಲಿ ಇದ್ದಾಗ ಜಾತಕನ ಪತ್ನಿಯ ಆರೋಗ್ಯ ತೃಪ್ತಿಕರವಲ್ಲ, ಪತ್ನಿಯು ದೇವರಲ್ಲಿ ಭಕ್ತಿಉಳ್ಳವಳು ಮತ್ತು ದೇವರ ಆರಾಧನೆ ಮಾಡುತ್ತಾಳೆ, ದಾಂಪತ್ಯ ಸುಖ ತೃಪ್ತಿಕರವಲ್ಲ, ದ್ವಿಭಾರ್ಯಾಯೋಗ ಸಂಭವನೀಯ, ವಿವಾಹದ ನಂತರ ಜಾತಕನು ಅಭಿವೃದ್ಧಿ ಹೊಂದುತ್ತಾನೆ, ಸ್ಥಾನ-ಮಾನ ಪಡೆಯುತ್ತಾನೆ. ಜಾತಕನು ಆರ್ಥಿಕ ಅಥವಾ ಧಾರ್ಮಿಕ ಸಂಘ-ಸಂಸ್ಥೆಗಳ ಆಡಳಿತ ಅಧಿಕಾರಿಯಾಗಿ ಉತ್ತಮರೀತಿಯಲ್ಲಿ ಆಡಳಿತ ನಿರ್ವಹಿಸಿ ಕೀರ್ತಿವಂತನು ಆಗುತ್ತಾನೆ. ಜಾತಕನಿಗೆ ಸಂತಾನ ಆದನಂತರ ಅಭಿವೃದ್ಧಿ ಆಗುತ್ತದೆ.

ಸಿಂಹಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠ ಮತ್ತು ಸಪ್ತಮಾಧಿಪತಿ ಶನಿಯು ಸಪ್ತಮಭಾವ (ಕುಂಭರಾಶಿ)ದಲ್ಲಿ, ದಂಪತಿಗಳಲ್ಲಿ ಕಲಹ, ಜಗಳ ಇರುತ್ತದೆ, ಪತ್ನಿಯಲ್ಲಿ ಹಠತನ ಮತ್ತು ಆರೋಗ್ಯದಲ್ಲಿ ಏರಿಳಿತ ಇರುತ್ತದೆ, ಜಾತಕನು ಕೈಗಾರಿಕೆ, ಯಂತ್ರಚಾಲನೆ, ಕಾರ್ಮಿಕ ಮುಕಂಡತ್ವ ಮೊದಲಾದವುದಲ್ಲಿ ಹಲವಾರು ಅಪವಾದ ಸಮಸ್ಯೆ-ಸಂಕಷ್ಟಗಳನ್ನು ಎದುರಿಸಿ ಸತತ ಪ್ರಯತ್ನ ಮತ್ತು ಪರಿಶ್ರಮದಿಂದ ದುಡಿದು ಮಧ್ಯತ್ರಿಭಾಗದಲ್ಲಿ ಅಭಿವೃದ್ಧಿಹೊಂದಿ ಸ್ಥಾನ-ಮಾನಾದಿಗಳಿಸಿ ಕೀರ್ತಿವಂತನು ಆಗುತ್ತಾನೆ.

ಕನ್ಯಾಲಗ್ನ-ದಲ್ಲಿ ಜನಿಸಿದವರಿಗೆ ಪಂಚಮ-ಷಷ್ಠಾಧಿಪತಿ ಶನಿಯು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯ ಆರೋಗ್ಯ ಉತ್ತಮವಾಗಿ ಇರುವುದಿಲ್ಲ, ದ್ವಿಭಾರ್ಯಾಯೋಗ ಸಂಭವಿಸುತ್ತದೆ, ಪತ್ನಿಯು ಸ್ವಭಾವದಲ್ಲಿ ತನ್ನವಾದವನ್ನೇ ಸಮರ್ಥಿಸುವವಳು, ದಾಂಪತ್ಯ ಸುಖ ತೃಪ್ತಿದಾಯಕ ಆಗಿರುವುದಿಲ್ಲ, ದಂಪತಿಗಳಲ್ಲಿ ಚರ್ಚೆ ಜಗಳ ಇರುತ್ತದೆ. ಮಕ್ಕಳು ಬುದ್ಧಿವಂತರು ಆದರೆ ಅವರಲ್ಲಿ ಹಠತನ ಇರುತ್ತದೆ. ಸಂತಾನನಷ್ಟ ಯೋಗ, ಇರುತ್ತದೆ, ವಿವಾಹದ ನಂತರ ಜಾತಕನಿಗೆ ವ್ಯಾಪಾರ-ವ್ಯವಹಾರ ಅಥವಾ ಉದ್ಯೋಗದಲ್ಲಿ ಏರಿಳಿತ, ಸ್ಥಾನನಾಶ ಅಥವಾ ಸ್ಥಾನಪಲ್ಲಟ ಸಂಭವಿಸುತ್ತದೆ.

ತುಲಾಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠಾಧಿಪತಿ ಹಾಗೂ ತೃತೀಯಾಧಿಪತಿ ಗುರುವು ಸಪ್ತಮಭಾವದಲ್ಲಿ (ಮೇಷರಾಶಿ) ಇದ್ದಾಗ ಜಾತಕನ ಪತ್ನಿಯು ಸತ್ಕುಲದವಳು ಹಠತನ ಮತ್ತು ಕೋಪ ಉಳ್ಳವಳು ಆಗಿರುತ್ತಾಳೆ, ಆರೋಗ್ಯ ತೃಪ್ತಿಕರವಲ್ಲ, ಗಂಡನೊಂದಿಗೆ ಹೊಂದಿಕೊಂಡು ಹೋಗದೆ ತನ್ನವಾದವನ್ನೇ ಸಮರ್ಥಿಸುತ್ತಾಳೆ, ದಾಂಪತ್ಯ ಸುಖ ತೃಪ್ತಿಕರವಲ್ಲ, ಆರ್ಥಿಕ ಸಂಕಷ್ಟಗಳಿಂದ ಪೀಡಿಸಲ್ಪಡುತ್ತಾರೆ, ಮಕ್ಕಳು ವಿದ್ಯಾವಂತರು, ಬುದ್ಧಿವಂತರು, ಹಾಗೂ ತಂದೆಯ ಅವಸಾನದ ನಂತರ ಪ್ರಗತಿ ಹೊಂದುತ್ತಾರೆ, ಜಾತಕನು ಶಾಸ್ತ್ರಾದಿಗಳನ್ನು ಬಲ್ಲವನು ಹಾಗೂ ತನ್ನಲ್ಲಿ ಶಾಸ್ತ್ರವಿಚಾರ ತಿಳಿಯಲು ಬಂದವರಿಗೆ ಸೂಕ್ತಮಾರ್ಗದರ್ಶನ ಮಾಡುತ್ತಾರೆ, ಪತ್ನಿಯ ಆರೋಗ್ಯ ತೃಪ್ತಿಕರವಲ್ಲ.

ವೃಶ್ಚಿಕಲಗ್ನ-ದಲ್ಲಿ ಜನಿಸಿದವರಿಗೆ ಲಗ್ನಾಧಿಪತಿ ಕುಜನೇ ಷಷ್ಠಾಧಿಪತಿ-ಯಾಗಿರುತ್ತಾನೆ, ಕುಜನು ಸಪ್ತಮಭಾವವಾದ ವೃಷಭರಾಶಿಯಲ್ಲಿರುವಾಗ ಜಾತಕನು ತೀಕ್ಷ್ಣ ಬುದ್ಧಿಯವನು, ಹಠವಾದಿಯು, ತನ್ನ ಶತ್ರುಗಳ ನಾಶಕ್ಕೆ ಪ್ರಯತ್ನಿಸುತ್ತಾನೆ, ಅತಿಕಾಮಿಯು, ಸ್ತ್ರೀಯರ ಸಹವಾಸದಿಂದ ಹಾನಿಗೀಡಾಗುತ್ತಾನೆ, ವ್ಯಾಪಾರ-ವ್ಯವಹಾರದಲ್ಲಿ ವಾದ-ವಿವಾದದಿಂದ ಹೂಗೂ ತನ್ನ ಮತವನ್ನು ಸಾಧಿಸಲು ಪ್ರಯತ್ನಿಸಿ ನಷ್ಟಕ್ಕೀಡಾಗುತ್ತಾನೆ, ಉದ್ಯೋಗ ಕ್ಷೇತ್ರದಲ್ಲಿ ಉನ್ನತ ಹುದ್ದೆಯಲ್ಲಿದ್ದು, ಅಭಿವೃದ್ಧಿಹೊಂದಿ ಧನ-ಸಂಪತ್ತನ್ನು ಗಳಿಸುತ್ತಾನೆ, ಸಂಗಡಿಗರೊಂದಿಗೆ ಕಲಹದಿಂದ ಹಾನಿಗೀಡಾಗುತ್ತಾನೆ, ವಿವಾಹ ಪೂರ್ವ ಕೆಲವು ಕನ್ಯೆಯರನ್ನು ನೋಡಿ ತಿರಸ್ಕರಿಸುತ್ತಾನೆ, ಅನಂತರ ಸಾಮಾನ್ಯ ಸೌಂದರ್ಯಉಳ್ಳ ಕನ್ಯೆಯನ್ನು ಮೆಚ್ಚಿ ವಿವಾಹ ಆಗುತ್ತಾನೆ, ವ್ಯಾಪಾರ-ವ್ಯವಹಾರದಲ್ಲಿ ಚರ್ಚೆ, ವಾದ-ವಿವಾದದಿಂದ ಪೂರ್ಣ ಸಫಲತೆ ಲಭಿಸುವುದಿಲ್ಲ, ಉದ್ಯೋಗ ಕ್ಷೇತ್ರದಲ್ಲಿ ಅಧಿಕಾರ ಲಭಿಸುತ್ತದೆ, ಆದರೆ ಅದರ ದುರುಪಯೋಗ ಪಡಿಸುತ್ತಾನೆ ಹಾಗೂ ಅನೈತಿಕ ಸಂಪತ್ತನ್ನು ಗಳಿಸುತ್ತಾನೆ.

ಧನುರ್ಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠ-ಲಾಭಾಧಿಪತಿ ಶುಕ್ರನು ಮಾರಕಾಧಿಪತಿ ಆಗಿರುತ್ತಾನೆ, ಇವನು ಸಪ್ತಮಭಾವವಾದ ಮಿಥುನ ರಾಶಿಯಲ್ಲಿ ಇದ್ದಾಗ ಜಾತಕನ ಪತ್ನಿಯು ವಿದ್ಯಾವಂತಳು, ಬುದ್ಧಿವಂತಳು ಮತ್ತು ಹಠಸ್ವಭಾವದವಳು, ಮತ್ತು ತನ್ನವಾದವನ್ನೇ ಸಮರ್ಥಿಸುವವಳು ಆಗಿರುತ್ತಾಳೆ, ಜಾತಕನು ಉದ್ಯೋಗಕ್ಷೇತ್ರದಲ್ಲಿ ಬುದ್ಧಿವಂತಿಕೆ ಮತ್ತು ಚತುರತೆಯಿಂದ ನಿರ್ವಹಿಸಿ ಸಂಸ್ಥೆಯನ್ನು ಉನ್ನತಿಗೆ ತರುತ್ತಾನೆ, ಭೂಮಿ, ಗೃಹ ಮತ್ತು ವಾಹನ ಪಡೆಯುತ್ತಾನೆ, ಹಾಗೂ ಸಮಾಜದಲ್ಲಿ ಗಣ್ಯವ್ಯಕ್ತಿಯಾಗಿ ಮಾನ-ಸನ್ಮಾನ ಪಡೆಯುತ್ತಾನೆ.

ಮಕರಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠಭಾಗ್ಯಾಧಿಪತಿ ಬುಧನು ಸಪ್ತಮಭಾವವಾದ ಕರ್ಕಟಕರಾಶಿಯಲ್ಲಿ ಇದ್ದಾಗ ಜಾತಕನ ಪತ್ನಿಯು ಸೌಂದರ್ಯವತಿಯು, ಚುರುಕುಬುದ್ಧಿಯವಳು, ತನ್ನ ವಾದವನ್ನೇ ಸಮರ್ಥಿಸುವವಳು ಆಗಿರುತ್ತಾಳೆ, ಮಾತಿನಲ್ಲಿ ಘನಸ್ಥಿಕೆ ಇರುತ್ತದೆ, ಜಾತಕನು ಕಷ್ಟಸಹಿಷ್ಣುವು, ಬುದ್ಧಿವಂತನಾದರೂ ಆಲಸ್ಯತನ ಮತ್ತು ಕಾರ್ಯಕಲಾಪಗಳನ್ನು ಮುಂದೂಡುವ ಸ್ವಭಾವದವನು ಆಗಿರುತ್ತಾನೆ, ಉತ್ತಮ ಸಂತಾನ ಪಡೆಯುತ್ತಾನೆ, ಮಾತಿನಲ್ಲಿ ತೀಕ್ಷ್ಣತೆ ಇರುತ್ತದೆ, ಮಧ್ಯಪ್ರಾಯದ ನಂತರ ಅಭಿವೃದ್ಧಿ ಹೊಂದುತ್ತಾನೆ, ಮಧ್ಯಪ್ರಾಯದ ನಂತರ ಪತ್ನಿಯ ಆರೋಗ್ಯದ ಹಾನಿ ಸಂಭವಿಸುತ್ತದೆ ಅಥವಾ ಪತ್ನಿಯನ್ನು ಕಳಕೊಳ್ಳುತ್ತಾನೆ, ಸಪ್ತಮಭಾವಸ್ಥಿತ ಷಷ್ಠಾಧಿಪತಿ ಬುಧನಿಂದ ವಿವಾಹ ನಿಷ್ಪರ್ಷೆಯಾಗಿ ಅನಂತರ ವಿವಾದದಿಂದ ವಿವಾಹ ಕೈಗೂಡುವುದಿಲ್ಲ.

ಕುಂಭಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠಾಧಿಪತಿ ಚಂದ್ರನು ಸಪ್ತಮಭಾವವಾದ ಸಿಂಹರಾಶಿಯಲ್ಲಿರುವಾಗ ಜಾತಕನ ಪತ್ನಿಯು ಸೌಂದರ್ಯವತಿಯು, ಬುದ್ಧಿವಂತಳು, ಸ್ವಾಭಿಮಾನ ಉಳ್ಳವನು, ತನ್ನ ವಾದವನ್ನು ಸಮರ್ಥಿಸುವ ಹಠತನ ಉಳ್ಳವಳು ಮತ್ತು ಸಿಡುಕು ಸ್ವಭಾವದವಳು ಆಗಿರುತ್ತಾಳೆ, ಸಪ್ತಮದ ಚಂದ್ರನು ದೂಷಿತನಾದರೆ ಜಾತಕನು ಎರಡನೇ ಸಂಬಂಧದಲ್ಲಿ ಸಿಲುಕಿ ಧನನಾಶ ಮತ್ತು ಅವಮಾನಿತನು ಆಗುತ್ತಾನೆ, ಪಾಲುವ್ಯಾಪಾರದಲ್ಲಿ ಪಾಲುದಾರರೊಂದಿಗೆ ವಾದ-ವಿವಾದ ಸಂಭವಿಸಿ, ಕೋರ್ಟುವ್ಯವಹಾರದಲ್ಲಿ ಸಿಲುಕಿ ಹಾನಿಗೀಡಾಗುತ್ತಾರೆ.

ಮೀನಲಗ್ನ-ದಲ್ಲಿ ಜನಿಸಿದವರಿಗೆ ಷಷ್ಠಾಧಿಪತಿ ರವಿಯು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಆತ್ಮಾಭಿಮಾನ ಉಳ್ಳವಳು ಉತ್ತಮ ಆಡಳಿತಾಧಿಕಾರಿಣಿಯು, ಪತಿಯಿಂದ ಹೀನೈಸಲ್ಪಡುತ್ತಾಳೆ, ದಂಪತಿಗಳಲ್ಲಿ ಅನ್ಯೋನ್ಯತೆ ಇರುತ್ತದೆ, ಆದರೆ ವಾದ-ವಿವಾದ ಸಂಭವಿಸುತ್ತದೆ, ಜಾತಕನು.

ಶಿಕ್ಷಣ ಇಲಾಖೆ ಅಥವಾ ಶಿಕ್ಷಕನಾಗಿ ಅಥವಾ ಸರಕಾರಿ ಉದ್ಯೋಗದಲ್ಲಿದ್ದು ಅಭಿವೃದ್ಧಿ ಹೊಂದುತ್ತಾನೆ, ಮೇಲಾಧಿಕಾರಿಗಳೊಂದಿಗೆ ಜಗಳ ಸಂಭವಿಸಿ ಹಾನಿಗೀಡಾಗುತ್ತಾನೆ, ಪಿತ್ರಾರ್ಜಿತಗೃಹ, ಭೂಮಿಯಿಂದ ದಾಯಾದಿಕಲಹ ಉಂಟಾಗಿ ಕೋರ್ಟು-ಕಛಹರಿ ವ್ಯವಹಾರಗಳಿಂದ ಆರ್ಥಿಕ ಸಂಕಷ್ಟಗಳಿಗೆ ಈಡಾಗುತ್ತಾನೆ.

## ೬೯. ನವಮಭಾವಗತ ಷಷ್ಠೇಶಫಲ

**ಪರಾಶರಹೋರಾ**

**ಷಷ್ಠೇಶೇ ಭಾಗ್ಯಗೇ ಜಾತಃ ಕಾಷ್ಠಪಾಷಾಣ ವಿಕ್ರಯೀ ।**
**ವ್ಯವಹಾರೇ ಕ್ವಚಿದ್ಧಾನಿಃ ಕ್ವಚಿದ್ವೃದ್ಧಿಶ್ಚ ಜಾಯತೇ ॥**

ಷಷ್ಠೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಕಟ್ಟಿಗೆ-ಕಲ್ಲು (ಶಿಲೆಕಲ್ಲು, ಜಲ್ಲಿ, ವಿಷವಸ್ತು), ಇವುಗಳ ವ್ಯಾಪಾರ ಮಾಡುತ್ತಾನೆ, ವ್ಯಾಪಾರದಲ್ಲಿ ಕೆಲವೊಮ್ಮೆ ಅಭಿವೃದ್ಧಿ ಮತ್ತು ಕೆಲವೊಮ್ಮೆ ಹಾನಿ ಸಂಭವಿಸುತ್ತದೆ.

**ಮಾನಸಾಗರೀ**

**ಶತ್ರುಪತಿರ್ಯದಿ ನವಮಃ ಕ್ರೂರಃ ಖಚರಸ್ತದಾ ಭವೇತ್ ಖಂಜಃ ।**
**ಬಂಧುವಿರೋಧೀ ಶಾಸ್ತ್ರಂ ನ ಮನ್ಯತೇ ಯಾಚಕಃ ಪುರುಷಃ ॥**

ಷಷ್ಠೇಶನು ಕ್ರೂರಗ್ರಹನಾಗಿ ನವಮಭಾವದಲ್ಲಿ ಇದ್ದರೆ ಜಾತಕನು ಕುಂಟನು, ಸಹೋದರರ ವಿರೋಧಿಯು,ಶಾಸ್ತ್ರವನ್ನು ತಿಳಿಯದವನು ಹಾಗೂ ಯಾಚಕವೃತ್ತಿ ನಿರ್ವಹಿಸುತ್ತಾನೆ.

**ಯವನಜಾತಕ**

**ನವಮಗೇಽರಿಪತೌ ಖಲಸಂಯುತೇ ಚರಣಭಙ್ಗಕರಃ ಸುಕೃತೋಜ್ಝಿತಃ ।**
**ವಿವಿಧವಾದಕರಶ್ಚ ಸ ವೈ ಪ್ರಿಯೋ ನ ಚ ಧನಂ ನ ಸುಖಂ ನ ಸುತಃ ಸದಾ ॥**

ಷಷ್ಠೇಶನು ಕ್ರೂರಗ್ರಹನಾಗಿ ನವಮಭಾವದಲ್ಲಿ ಇದ್ದಾಗ ಜಾತಕನಿಗೆ ಆಚರಣೆ ಅನುಷ್ಠಾನದಲ್ಲಿ ಭಂಗ ಬರುತ್ತದೆ, ಭಾಗ್ಯರಹಿತನು, ವಿವಿಧರೀತಿಯಲ್ಲಿ ವಾದ-ವಿವಾದ ಮಾಡುವವನು, ಪ್ರೀತಿ ಪಾತ್ರನಾದವನು ಮತ್ತು ಧನ, ಪುತ್ರ ಮತ್ತು ಸುಖಹೀನನು ಆಗುತ್ತಾನೆ.

ಅನುಭವದಲ್ಲಿ - ಷಷ್ಠೇಶನು ನವಮಭಾವದಲ್ಲಿ ಇದ್ದಾಗ ಜಾತಕನಿಗೆ ಧಾರ್ಮಿಕ ಕಾರ್ಯಕಲಾಪ ಆಚರಿಸುವಾಗ ಅಡಚಣೆ ಅಥವಾ ವಿಘ್ನ ಸಂಭವಿಸುತ್ತದೆ, ತಂದೆಯ ಆರೋಗ್ಯ ಉತ್ತಮ ಇರುವುದಿಲ್ಲ, ಸಹೋದರ ರೊಂದಿಗೆ ಕಲಹ ಸಂಭವಿಸುತ್ತದೆ, ಸಂಚಾರಕಾಲದಲ್ಲಿ ಹಣ ಅಥವಾ ವಸ್ತುಗಳ ಕಳವು ಸಂಭವಿಸುತ್ತದೆ. ಜಾತಕನು ಪರಿಶ್ರಮ ಮತ್ತು ಹಠತನದಿಂದ ದುಡಿದರೆ ಭಾಗ್ಯೋದಯ ಆಗುತ್ತದೆ. ತಂದೆಯೊಂದಿಗೆ ವಾದ-ವಿವಾದ ಮಾಡುತ್ತಾನೆ.

## ೭೦. ದಶಮಭಾವಗತ ಷಷ್ಠೇಶಫಲ

**ಪರಾಶರಹೋರಾ**

ಷಷ್ಠೇಶೇ ದಶಮೇ ಭಾವೇ ಮಾನವಃ ಕುಲವಿಶ್ರುತಃ ।
ಅಭಕ್ತಶ್ಚ ಪಿತುರ್ವಕ್ತಾ ವಿದೇಶೇ ಚ ಸುಖೀ ಭವೇತ್ ॥

ಷಷ್ಠೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತನ್ನಕುಲದಲ್ಲಿ ಶ್ರೇಷ್ಠನು, ತನ್ನ ತಂದೆಯಿಂದ ಪ್ರತ್ಯೇಕಿಸಲ್ಪಡದವನು, ಉತ್ತಮ ಮಾತುಗಾರನು, ಮತ್ತು ವಿದೇಶದಲ್ಲಿ ಸುಖವಂತನು ಆಗುತ್ತಾನೆ.

**ಮಾನಸಾಗರೀ**

ಅರಿಪೇ ದಶಮಗೃಹಸ್ಥೇ ಕ್ರೂರೇ ಮಾತೃ ರಿಪುಸ್ತದಾ ದುಷ್ಟಃ ।
ಧರ್ಮಸುತಪಾಲನಮತಿರ್ಮಾತುರ್ದೋಷೀ ಭವೇದ್ವೈರೀ ॥

ಷಷ್ಠೇಶನು ಕ್ರೂರಗ್ರಹನಾಗಿ ದಶಮಭಾವದಲ್ಲಿ ಇದ್ದರೆ ಜಾತಕನು ತಾಯಿಯ ಶತ್ರು ಹಾಗೂ ದುಷ್ಟನು, ಧರ್ಮ ಮತ್ತು ಪುತ್ರನ ಪಾಲನೆ ಮಾಡುತ್ತಾನೆ. ಬುದ್ಧಿವಂತನು, ತಾಯಿಯ ದೋಷದ ಕಾರಣದಿಂದ ಅವಳ ಶತ್ರು ಆಗುತ್ತಾನೆ.

**ಯವನಜಾತಕ**

ಅರಿಗೃಹಾಧಿಪತಿರ್ದಶಮೇ ಯದಾ ಜನನಿವೈರಕರಶ್ಚಪಲಃ ಖಲಃ ।
ಭವತಿ ಪಾಲಕಪುತ್ರಯುತಃ ಶುಭೈರ್ಜನಕಹಾ ಜಗತೀ ಪರಿಪಾಲಕಃ ॥

ಷಷ್ಠೇಶನು ದಶಮಭಾವದಲ್ಲಿ ಇದ್ದಾಗ ಜಾತಕನಿಗೆ ತಾಯಿಯೊಂದಿಗೆ ವೈರತ್ವ ಇರುತ್ತದೆ, ಚಂಚಲ ಸ್ವಭಾವದವನು, ದುಷ್ಟನು ಆಗುತ್ತಾನೆ. ಷಷ್ಠೇಶನು

ಶುಭಗ್ರಹರಿಂದ ಕೂಡಿದ್ದರೆ ತಂದೆಯ ಪಾಲನ-ಪೋಷಣ ಮಾಡುವ ಪುತ್ರರಿಂದ ಕೂಡಿರುವವನು ಮತ್ತು ಪಿತೃನಾಶಕ ಭೂಮಿಯ ಪಾಲನೆ ಮಾಡುವವನು ಆಗುತ್ತಾನೆ.

## ೭೧. ಏಕಾದಶಭಾವಗತ ಷಷ್ಠೇಶಫಲ

**ಪರಾಶರಹೋರಾ**

> **ಷಷ್ಠೇಶೇ ಲಾಭಗೇ ಜಾತಃ ಶತ್ರುತೋ ಧನಮಾಪ್ನುಯಾತ್ ।**
> **ಗುಣವಾನ್ ಸಾಹಸೀ ಮಾನೀ ಕಿಂತು ಪುತ್ರಸುಖೋಜ್ಝಿತಃ ॥**

ಷಷ್ಠೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳಿಂದ ಅಥವಾ ಸಂಘರ್ಷದಿಂದ ಧನ-ಸಂಪತ್ತನ್ನು ಪಡೆಯುತ್ತಾನೆ, ಗುಣವಂತನು, ಸಾಹಸಿಗನು, ಮಾನವಂತನು ಮತ್ತು ಪುತ್ರಸುಖದಿಂದ ಪ್ರತ್ಯೇಕಿಸಲ್ಪಟ್ಟವನು ಆಗುತ್ತಾನೆ.

**ಮಾನಸಾಗರೀ**

> **ವೈರಿಪತೌ ಲಾಭಗತೇ ಕ್ರೂರೇ ಮರಣಂ ವಿಪಕ್ಷತೋ ಭವತಿ ।**
> **ವೈರೀ ತಸ್ಕರಹಾನಿಶ್ಚತುಷ್ಪದಾಲ್ಲಾಭವಾನ್ಮನುಜಃ ॥**

ಷಷ್ಠೇಶನು ಕ್ರೂರಗ್ರಹನಾಗಿ ಲಾಭಭಾವದಲ್ಲಿ ಇದ್ದರೆ ಜಾತಕನಿಗೆ ಶತ್ರು ಪಕ್ಷದವರಿಂದ ಮರಣ ಆಗುತ್ತದೆ, ಹೆಚ್ಚು ಶತ್ರುಗಳು ಇರುತ್ತಾರೆ, ಕಳ್ಳರಿಂದ ಹಾನಿ ಹಾಗೂ ಚತುಷ್ಪಾದ ಪ್ರಾಣಿಗಳಿಂದ ಲಾಭಆಗುತ್ತವೆ.

**ಯವನಜಾತಕ**

> **ಭವಗತೇಽರಿಪತೌ ಖಲಸಂಗಮೋ ರಿಪುಜನಾನ್ಮರಣಂ ಖಲು ಜಾಯತೇ ।**
> **ನೃಪತಿಚೌರಜನಾದ್ಧನಹಾನಿಕೃಚ್ಛುಭಖಗೈಃ ಸತತಂ ಶುಭಕೃದ್ಭವೇತ್ ॥**

ಷಷ್ಠೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದುಷ್ಟಜನರೊಂದಿಗೆ ಕೂಡಿರುತ್ತಾನೆ ಮತ್ತು ಶತ್ರುಜನರಿಂದ ಮರಣ ಸಂಭವಿಸುತ್ತದೆ, ರಾಜರಿಂದ ಮತ್ತು ಕಳ್ಳರಿಂದ ಧನಹಾನಿ ಸಂಭವಿಸುತ್ತದೆ, ಷಷ್ಠೇಶನು ಶುಭಗ್ರಹರಿಂದ ಕೂಡಿದ್ದರೆ ಶುಭಫಲ ಲಭಿಸುತ್ತದೆ.

ಅನುಭವದಲ್ಲಿ - ಷಷ್ಠೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನ-ಸಂಪತ್ತನ್ನು ಗಳಿಸುತ್ತಾನೆ, ಆದರೆ ಮಿತ್ರರಿಗೆ ಅಥವಾ ಸಂಗಡಿಗರಿಗೆ ಧನ-ಸಹಾಯ ಮಾಡುವುದರಿಂದ ನಷ್ಟಕ್ಕೀಡಾಗುತ್ತಾರೆ, ಜ್ಯಾಮೀನು ವ್ಯವಹಾರದಿಂದ ನಷ್ಟಸಂಭವಿಸುತ್ತದೆ, ಹಿರಿಯಸಹೋದರನೊಂದಿಗೆ ಕಲಹ ಅಥವಾ ಹಿರಿಯ ಸಹೋದರನನ್ನು ಕಳಕೊಳ್ಳುತ್ತಾನೆ.

## ೭೨. ವ್ಯಯಭಾವಗತ ಷಷ್ಠೇಶಫಲ

**ಪರಾಶರಹೋರಾ**

**ಷಷ್ಠೇಶೇ ವ್ಯಯಭಾವಸ್ಥೇ ವ್ಯಸನೇ ವ್ಯಯಕೃತ್ ಸದಾ ।**
**ವಿದ್ವದ್‌ದ್ವೇಷೀ ಭವೇಜ್ಜಾತೋ ಜೀವಹಿಂಸಾಸು ತತ್ಪರಃ ॥**

ಷಷ್ಠೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ದುರಭ್ಯಾಸದಿಂದ ಧನ-ಸಂಪತ್ತಿನವ್ಯಯ ಸಂಭವಿಸುತ್ತದೆ, ವಿದ್ಯಾವಂತರನ್ನು ದ್ವೇಷಿಸುತ್ತಾನೆ ಮತ್ತು ಯಾವಾಗಲೂ ಪ್ರಾಣಿಹಿಂಸೆಯಲ್ಲಿ ತತ್ಪರನು ಆಗಿರುತ್ತಾನೆ.

**ಮಾನಸಾಗರೀ**

**ಷಷ್ಠಪತೌ ದ್ವಾದಶಗೇ ಚತುಷ್ಪದಾನ್ ದ್ರವ್ಯಹಾನಿಕರಃ ।**
**ಗಮನಾಗಮನಾಲ್ಲಕ್ಷ್ಮೀಹಾ ದೈವಪರಃ ಕೇವಲಂ ಭವತಿ ॥**

ಷಷ್ಠೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಚತುಷ್ಪಾದ ಪ್ರಾಣಿಗಳಿಂದ ಧನಹಾನಿ ಆಗುತ್ತದೆ, ಯಾತ್ರೆ-ಪ್ರಯಾಣದಲ್ಲಿ ಅಪವ್ಯಯ ಆಗುತ್ತದೆ, ಭಾಗ್ಯವಂತನು ಆಗುತ್ತಾನೆ.

**ಯವನಜಾತಕ**

**ವ್ಯಯಗತೇ ಚ ಚತುಷ್ಪದವಾಜಿನಾಂ ರಿಪುಪತೌ ಧನಧಾನ್ಯಸುಖಕ್ಷಯಃ ।**
**ಗಮನಬುದ್ಧಿ ನಿರಂತರಮೇವ ಯದ್ದಿನನಿಶಂ ಚ ಧನಾಯ ಕೃತೋದ್ಯಮಃ ॥**

ಷಷ್ಠೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ನಾಲ್ಕುಕಾಲುಗಳುಳ್ಳ ಪ್ರಾಣಿಗಳು, ಕುದುರೆ, ಧನ-ಧಾನ್ಯ ಮತ್ತು ಸುಖವು ಕ್ಷೀಣಿಸುತ್ತದೆ, ಪ್ರಯಾಣ ಮಾಡುವ ನಿರಂತರ ಇಚ್ಛೆ ಇರುತ್ತದೆ, ಹಗಲು-ರಾತ್ರಿ ಧನಕ್ಕೋಸ್ಕರ ಉದ್ಯಮ ಮಾಡುತ್ತಾನೆ.

ಅನುಭವದಲ್ಲಿ - ಷಷ್ಠೇಶನು ವ್ಯಯಭಾವದಲ್ಲಿ ಇದ್ದಾಗ ವಿಪರೀತ ಧನಯೋಗ ಆಗುತ್ತದೆ, ಜಾತಕನು ಚತುರತೆಯಿಂದ, ಷಷ್ಠೇಶನು ಪಾಪಗ್ರಹನಾದರೆ ವಂಚನೆಯಿಂದ ಧನ-ಸಂಪತ್ತನ್ನು ಗಳಿಸುತ್ತಾನೆ, ಸಂಚಾರ ಉದ್ಯಮ, ಬಡ್ಡಿ ವ್ಯವಹಾರ, ಹಾಲಿನ ಡ್ಯಾರಿ, ಸಾರಿಗೆ-ಸಂಪರ್ಕ ಮೊದಲಾದ ಉದ್ದಿಮೆಗಳನ್ನು ನಿರ್ವಹಿಸುತ್ತಾನೆ, ಆರ್ಥಿಕ ಸಂಕಷ್ಟಗಳಿಗೀಡಾಗುತ್ತಾನೆ. ಪಶುಪಾಲನೆ ಮಾಡುತ್ತಾನೆ, ಆದರೆ ಅಧಿಕಲಾಭ ಗಳಿಸಲು ಅಸಮರ್ಥನು ಆಗುತ್ತಾನೆ.

# ಲಗ್ನಾದಿಭಾವಗತ ಸಪ್ತಮೇಶಫಲ

## ೭೩. ಲಗ್ನಭಾವಗತ ಸಪ್ತಮೇಶಫಲ

**ಪರಾಶರಹೋರಾ**

**ದಾರೇಶೇ ಲಗ್ನಗೇ ಜಾತಃ ಪರದಾರೇಷು ಲಂಪಟಃ ।**
**ದುಷ್ಟೋ ವಿಚಕ್ಷಣೋಽಧೀರೋ ಜನೋ ವಾತರುಜಾನ್ವಿತಃ ॥**

ಸಪ್ತಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಪರಸ್ತ್ರೀಯಲ್ಲಿ ಅನುರಕ್ತನು, ಕಾಮುಕನು, ದುಷ್ಟನು, ವಿದ್ವಾಂಸನು, ನಿಪುಣನು, ಧೈರ್ಯವಿಲ್ಲದವನು ಮತ್ತು ವಾತರೋಗ ಪೀಡಿತನು ಆಗುತ್ತಾನೆ.

**ಮಾನಸಾಗರೀ**

**ದಯಿತೇಶೋ ಲಗ್ನಗತಃಸ್ತೋಕಸ್ನೇಹಿನಮನ್ಯಭಾರ್ಯಾಯಾಮ್ ।**
**ಭೋಗಭುಜಂ ರೂಪಯುತಂ ಜನಯತಿದಯಿತಾದಲಿತಚಿತ್ತಮ್ ॥**

ಸಪ್ತಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನಿಗೆ ಪರಸ್ತ್ರೀಯೊಂದಿಗೆ ಅಲ್ಪಮಿತ್ರತ್ವ ಇರುತ್ತದೆ, ಐಶ್ವರ್ಯ, ಸುಂದರವಾದ ಬಾಹುಗಳು ಮತ್ತು ಜಾತಕನು ತನ್ನ ಪತ್ನಿಯಲ್ಲಿ ಆಸಕ್ತನು ಆಗಿರುತ್ತಾನೆ.

**ಯವನಜಾತಕ**

**ಮದಪತಿಸ್ತನುಗಃ ಕುರುತೇ ನರಂ ಸಕಲಭೋಗಯುತಂ ಚ ಗತವ್ಯಯಮ್ ।**
**ಬಹುಕಲತ್ರಸುಖೀ ನಹಿ ಮಾನುಷೋ ದಲಿತವೈರಿಜನಃ ಪ್ರಮದೋತ್ಸುಕಃ ॥**

ಸಪ್ತಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಸಕಲಭೋಗಯುತನು, ಖರ್ಚು ಇಲ್ಲದವನು, ಹೆಚ್ಚು ಪತ್ನಿಯರಿದ್ದರೂ ಸುಖವಂತನು ಆಗುವುದಿಲ್ಲ, ವೈರಿಜನರನ್ನು ಗೆಲ್ಲುತ್ತಾನೆ ಮತ್ತು ಸ್ತ್ರೀಯರಲ್ಲಿ ಉತ್ಸುಕನು ಆಗುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು, ನಿಪುಣನು, ಉತ್ತಮ ಆಡಳಿತಾಧಿಕಾರಿ, ಪರಸ್ತ್ರೀ ವ್ಯಾಮೋಹ ಉಳ್ಳವನು, ಮಾನಸಿಕ ಚಂಚಲತೆ, ಮಾತಿನಲ್ಲಿ ತೀಕ್ಷ್ಣತೆ ಇರುತ್ತದೆ, ಶತ್ರುಗಳನ್ನು ಜಯಿಸುತ್ತಾನೆ, ಪಾಲುವ್ಯಾಪಾರದಲ್ಲಿ ಹೊಂದಾಣಿಕೆ ಇಲ್ಲದೆ ಕಲಹ ಸಂಭವಿಸಿ ಹಾನಿಯಾಗುತ್ತಾನೆ, ಪತ್ನಿಯ ಹೆಸರಿನಲ್ಲಿ ಭಂಡವಾಳ ಹಾಕಿ ವ್ಯಾಪಾರ ಮಾಡಿದರೆ ಅಭಿವೃದ್ಧಿ ಹೊಂದುತ್ತಾನೆ.

## ೭೪. ದ್ವಿತೀಯಭಾವಗತ ಸಪ್ತಮೇಶಫಲ

ಪರಾಶರಹೋರಾ

**ದಾರೇಶೇ ಧನಗೇ ಜಾತೋ ಬಹುಸ್ತ್ರೀಭಿಃ ಸಮನ್ವಿತಃ ।**
**ದಾರಯೋಗಾದ್ಧನಾಪ್ತಿಶ್ಚ ದಿರ್ಘಸೂತ್ರೀ ಚ ಮಾನವಃ ॥**

ಸಪ್ತಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಅನೇಕ ಸ್ತ್ರೀಯರಿಂದ ಕೂಡಿರುತ್ತಾನೆ, ತನ್ನ ಪತ್ನಿಯ ಯೋಗ ಮೂಲಕ ಧನಗಳಿಸುತ್ತಾನೆ ಮತ್ತು ಶಿಸ್ತುಪಾಲನೆಯ ಅಧಿಕಾರಿ ಆಗುತ್ತಾನೆ.

ಮಾನಸಾಗರೀ

**ಜಾಯಾಪತೌ ಧನಸ್ಥೇ ದುಷ್ಟಾ ದಯಿತಾ ಸುತೇಪ್ಸಿತಾ ಭವತಿ ।**
**ವಿತ್ತಂ ಚ ಕಲತ್ರಕೃತಂ ಸತತಂ ವಸತೋ ವಿಸಙ್ಗರ್ಶ್ಚ ॥**

ಸಪ್ತಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ದುಷ್ಟಸ್ವಭಾವದವಳು,ಪುತ್ರಪ್ರಾಪ್ತಿಯ ಅಭಿಲಾಷೆ ಉಳ್ಳವಳು, ಪತ್ನಿಯಿಂದ ಧನಪ್ರಾಪ್ತಿ, ಪತಿ-ಪತ್ನಿಯರು ಒಟ್ಟಿಗೆ ಇದ್ದು ಪರಸ್ಪರ ದೂರ ಇರುತ್ತಾರೆ.

ಯವನಜಾತಕ

**ಮದಪತೌ ಧನಗೇ ವನಿತಾ ಖಲಾ ಭವತಿ ವಿತ್ತವತೀ ಸುಖವರ್ಜಿತಾ ।**
**ಸ್ವಪತಿವಾಕ್ಯ ವಿಲೋಪಕರೀ ಮದಾನ್ಮತಿಮತೀ ಸ್ವಯಮಾತ್ಮಜವರ್ಜಿತಾ ॥**

ಸಪ್ತಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ದುಷ್ಟಳು, ಧನವಂತಳು, ಸುಖವಿಲ್ಲದವಳು, ಗರ್ವದಿಂದ ಪತಿಯ ವಚನ ಲೋಪ ಮಾಡುತ್ತಾಳೆ, ಬುದ್ಧಿವಂತಳು ಮತ್ತು ಸ್ವಯಂಸಂತಾನ ರಹಿತಳು ಆಗುತ್ತಾಳೆ.

ಅನುಭವದಲ್ಲಿ - ಸಪ್ತಮಾಧಿಪತಿಯು ಮಾರಕಾಧಿಪತಿಯಾದ್ದರಿಂದ ಮಾರಕ ಸ್ಥಾನವಾದ ದ್ವಿತೀಯಭಾವದಲ್ಲಿ ಇದ್ದರೆ ಬಲಿಷ್ಠ ಮಾರಕನು ಆಗುತ್ತಾನೆ, ದ್ವಿತೀಯ ಭಾವಸ್ಥಿತ ಸಪ್ತಮೇಶನಿಂದ ಆರ್ಥಿಕ ಪರಿಸ್ಥಿತಿ ಇರುತ್ತದೆ, ಕುಟುಂಬ ಕಲಹದಿಂದ ಧನ ಸಂಪತ್ತಿನ ನಾಶ ಸಂಭವಿಸುತ್ತದೆ, ಪತ್ನಿಯಿಂದ ಧನಪ್ರಾಪ್ತಿ, ಪತ್ನಿಯು ಗರ್ವಿಷ್ಠಳು, ತನ್ನ ವಾದವನ್ನೇ ಸಮರ್ಥಿಸುತ್ತಾಳೆ, ಪತಿ-ಪತ್ನಿಯರಲ್ಲಿ ವಾದ-ವಿವಾದ ಇರುತ್ತದೆ, ದಾಂಪತ್ಯ ಸುಖ ತೃಪ್ತಿಕರವಲ್ಲ, ಸಂತಾನ ಚಿಂತೆ ಇರುತ್ತದೆ.

## ೭೫. ತೃತೀಯಭಾವಗತ ಸಪ್ತಮೇಷಫಲ

**ಪರಾಶರಹೋರಾ**

> **ದಾರೇಶೇ ಸಹಜೇ ಜಾತೋ ಮೃತಾಪತ್ಯೋ ಹಿ ಮಾನವಃ ।**
> **ಕದಾಚಿಜ್ಜಾಯತೇ ಪುತ್ರೀ ಯತ್ನಾತ್ ಪುತ್ರೋಽಪಿ ಜೀವತಿ ॥**

ಸಪ್ತಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಸಂತಾನ ನಷ್ಟ ಆಗುತ್ತದೆ, ಯಾವುದೋ ಒಂದು ಕಾಲದಲ್ಲಿ ಪುತ್ರೀಜನನ ಆಗುತ್ತದೆ. ಪ್ರಯತ್ನದಿಂದ ಪುತ್ರನನ್ನು ಕೂಡಾ ರಕ್ಷಿಸಬೇಕು.

**ಮಾನಸಾಗರೀ**

> **ಸಪ್ತಮಗೇ ಸಹಜಗತೇ ಹ್ಯಾತ್ಮಬಲೋ ಬಂಧುವತ್ಸಲೀ ದುಃಖೀ ।**
> **ದೇವರರತಾ ಸುರೂಪಾ ಗೃಹಿಣೀ ಕ್ರೂರೇ ಸುಹೃದ್‌ಗೃಹಗಾ ॥**

ಸಪ್ತಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಆತ್ಮಬಲ ಉಳ್ಳವನು, ಬಂಧು-ಬಾಂಧವರೊಡನೆ ವಾತ್ಸಲ್ಯ ಉಳ್ಳವನು, ಹಾಗೂ ದುಃಖಿತನು ಆಗುತ್ತಾನೆ, ಸಪ್ತಮಾಧಿಪತಿಯು ಕ್ರೂರಗ್ರಹನಾದರೆ ಜಾತಕನ ಪತ್ನಿಯು ತನ್ನ ಮೈದುನನಲ್ಲಿ ಆಸಕ್ತಳು, ಸೌಂದರ್ಯವಂತಳು, ಗೃಹಿಣಿಯು, ಮಿತ್ರರ ಗೃಹಕ್ಕೆ ಹೋಗುವವಳು ಆಗಿರುತ್ತಾಳೆ.

ಯವನಜಾತಕ

ಮದಪತೌ ಸಹಜಸ್ಥಲಗೇ ಸ್ವಯಂ ಬಲಯುತೋ ನಿಜಬಾಂಧವವಲ್ಲಭಃ ।
ಭವತಿ ದೇವರಪಕ್ಷಯುತಾಽಬಲಾ ಸ್ಮರಮದಾ ದಯಿತಾಗೃಹಗಾಃ ಖಲಾಃ ॥

ಸಪ್ತಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸ್ವತಹ ಬಲಿಷ್ಠನು, ತನ್ನ ಬಾಂಧವ ಜನರಿಗೆ ಪ್ರಿಯನು, ಜಾತಕನ ಸಪ್ತಮಭಾವದಲ್ಲಿ ಕ್ರೂರಗ್ರಹನಿದ್ದರೆ ಅವನ ಪತ್ನಿಯು ಗಂಡನ ತಮ್ಮನ ಪಕ್ಷದಲ್ಲಿರುತ್ತಾಳೆ, ಕಾಮದ ಅಮಲು ಇರುತ್ತದೆ ಮತ್ತು ಸಂತಾನ ರಹಿತಳು ಆಗುತ್ತಾಳೆ.

ಅನುಭವದಲ್ಲಿ - ಸಪ್ತಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ವಿವಾಹ ಸಂಬಂಧ ಕೂಡಿಬರಲು ದೀರ್ಘಕಾಲ ಪ್ರಯತ್ನ ಮಾಡಬೇಕಾಗುತ್ತದೆ, ಜೀವಿತದ ಆದಿತ್ರಿಭಾಗದಲ್ಲಿ ಜಾತಕನು ಹಲವಾರು ಸಂಕಷ್ಟಗಳನ್ನು ಎದುರಿಸಿ ಪರಿಶ್ರಮದಿಂದ ದುಡಿದು ಅಭಿವೃದ್ಧಿ ಹೊಂದುತ್ತಾನೆ, ಸಂಚಾರ ಉದ್ಯಮದಿಂದ ಏಳಿಗೆ ಆಗುತ್ತದೆ, ಜಾತಕನು ಕೈಕೊಂಡ ಕಾರ್ಯಗಳನ್ನು ಪೂರ್ತಿಗೊಳಿಸಲು ಕಾಲಹರಣ ಮತ್ತು ಪರಿಶ್ರಮ ಮಾಡಬೇಕಾಗುತ್ತದೆ.

## ೭೬. ಚತುರ್ಥಭಾವಗತ ಸಪ್ತಮೇಶಫಲ

ಪರಾಶರಹೋರಾ

ದಾರೇಶೇ ಸುಖಭಾವಸ್ಥೇ ಜಾಯಾ ನಾಸ್ಯ ವಶೇ ಸದಾ ।
ಸ್ವಯಂ ಸತ್ಯಪ್ರಿಯೋ ಧೀಮಾನ್ ಧರ್ಮಾತ್ಮಾ ದಂತರೋಗಯುಕ್ ॥

ಸಪ್ತಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಆತನವಶ ಇರುವುದಿಲ್ಲ, ಸ್ವತಹಃ ಸತ್ಯಪ್ರಿಯನು, ಬುದ್ಧಿವಂತನು ಮತ್ತು ಧರ್ಮಾತ್ಮನು ಆಗಿರುತ್ತಾನೆ. ಹಲ್ಲಿನ ರೋಗದಿಂದ ಪೀಡಿಸಲ್ಪಡುತ್ತಾನೆ.

ಮಾನಸಾಗರೀ

ಜಾಯೇಶೇ ತುರ್ಯಸ್ಥೇ ಲೋಲಃ ಪಿತೃವೈರಸಾಧಕಸ್ನೇಹೀ ।
ಅಸ್ಯ ಪಿತಾ ದುರ್ವಾಕ್ಯಸ್ತದ್ಭಾರ್ಯಾ ಪಾಲಯೇಜ್ಜನಕಃ ॥

ಸಪ್ತಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು, ಚಂಚಲನು, ಹಾಗೂ ತಂದೆಯ ವೈರಿಯೊಂದಿಗೆ ಸ್ನೇಹ ಉಳ್ಳವನು, ಆತನ ತಂದೆಯು ಕೆಟ್ಟ ಮಾತುಗಳನ್ನು ಆಡುವವನು, ಆತನ ಪತ್ನಿಯ ಪಾಲನೆಯು ಆವಳ ತಂದೆಯ ಮನೆಯಲ್ಲಿ ಆಗುತ್ತದೆ.

**ಯವನಜಾತಕ**

**ಸ್ಮರಪತಿಸ್ತನುತೇ ಸುಖಭಾವಗೋ ವಿಬಲಿನಂ ಪಿತೃವೈರಕರಂ ಖಲಮ್ ।**
**ಭವತಿ ವಾ ದಯಿತಾ ಪರಿಪಾಲಕಃ ಸ್ವಪತಿವಾಕ್ಯಯುತಾ ಮಹಿಲಾ ಸದಾ ॥**

ಸಪ್ತಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಬಲಕಳ-ಕೊಂಡವನು, ತಂದೆಯೊಂದಿಗೆ ವೈರತ್ವ ಮಾಡುವವನು, ದುಷ್ಟನು, ಸ್ತ್ರೀಯ ಪಾಲಕನು ಮತ್ತು ಅವನ ಪತ್ನಿಯು ಯಾವಾಗಲೂ ಪತಿಯ ಮಾತಿನಂತೆ ಇರುತ್ತಾಳೆ.

ಅನುಭವದಲ್ಲಿ - ಸಪ್ತಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು, ಆತನ ತಾಯಿಯ ಸಂಬಂಧಿಕಳು ಆಗಿರುತ್ತಾಳೆ, ಪಿತ್ರಾರ್ಜಿತ ಭೂಮಿ, ಮನೆ ಲಭಿಸುವುದಿಲ್ಲ, ಸಪ್ತಮೇಶನು ಪಾಪಗ್ರಹನಾದರೆ ಪಿತ್ರಾರ್ಜಿತ ಭೂಮಿ, ಮನೆ ಪ್ರಾಪ್ತಿಗೆ ಕೋರ್ಟು ವ್ಯವಹಾರ ಸಂಭವಿಸುತ್ತದೆ, ತಾಯಿಯೊಂದಿಗೆ ಕಲಹ ಅಥವಾ ತಾಯಿಯನ್ನು ಕಳಕೊಳ್ಳುತ್ತಾನೆ, ಜಾತಕನ ಪತ್ನಿಯು ಉದ್ಯೋಗದಲ್ಲಿ ಊರಿನಲ್ಲಿ ಅಥವಾ ಪರಊರಿನಲ್ಲಿ ಇರುತ್ತಾಳೆ, ಸಪ್ತಮೇಶನು ಶುಭಗ್ರಹನಾದರೆ ಜಾತಕನು, ಭೂವ್ಯವಹಾರ, ಮನೆ ಕಟ್ಟಿಸಿ ಮಾರಾಟ ಮಾಡುವುದು ಮತ್ತು ವಾಹನ ಮಾರಾಟ ಮೊದಲಾದವುಗಳಿಂದ ಧನಲಾಭ ಪಡೆಯುತ್ತಾನೆ, ತೋಟಗಾರಿಕೆ, ಕೃಷಿ-ಬೇಸಾಯದಿಂದ ಅಭಿವೃದ್ಧಿ ಹೊಂದುತ್ತಾನೆ, ದೇವಸ್ಥಾನ ಅಥವಾ ಧಾರ್ಮಿಕ ಸಂಸ್ಥೆಗಳ ಆಡಳಿತಗಾರನು ಆಗುತ್ತಾನೆ.

## ೭೭. ಪಂಚಮಭಾವಗತ ಸಪ್ತಮೇಶಫಲ

**ಪರಾಶರಹೋರಾ**

**ದಾರೇಶೇ ಪಂಚಮೇ ಜಾತೋ ಮಾನೀ ಸರ್ವಗುಣಾನ್ವಿತಃ ।**
**ಸರ್ವದಾ ಹರ್ಷಯುಕ್ತಶ್ಚ ತಥಾ ಸರ್ವಧನಾಧಿಪಃ ॥**

ಸಪ್ತಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಮಾನವಂತನು, ಸಕಲಗುಣಗಳಿಂದ ಕೂಡಿದವನು, ಮತ್ತು ಯಾವಾಗಲೂ ಸಂತೋಷದಿಂದ ಇರುತ್ತಾನೆ ಹಾಗೂ ಎಲ್ಲಧನದ ಒಡೆಯನು ಆಗುತ್ತಾನೆ.

**ಮಾನಸಾಗರೀ**

> ಸಪ್ತಮಪತೌ ಸುತಸ್ಥೇ ಸೌಭಾಗ್ಯಯುತಃ ಸುತಾನ್ವಿತಃ ಪುರುಷಃ ।
> ಪ್ರಿಯ ಸಾಹಸೋ ದುಷ್ಟಮತಿಸ್ತತ್ತನಯಃ ಪಾಲಯೇದ್ದಯಿತಾಮ್ ॥

ಸಪ್ತಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಭಾಗ್ಯವಂತನು, ಪುತ್ರರಿಂದ ಕೂಡಿರುವವನು, ಸಾಹಸಪ್ರಿಯನು, ದುಷ್ಟಬುದ್ಧಿ, ಆತನಪತ್ನಿಯ ಆರೈಕೆಯನ್ನು ಆತನ ಮಕ್ಕಳು ಮಾಡುತ್ತಾರೆ.

**ಯವನಜಾತಕ**

> ಮದಪತಿಸ್ತನಯೇ ತನಯಪ್ರದಃ ಸುಭಗಸೌಖ್ಯಕರಃ ಸುಖಸಂಯುತಃ ।
> ಭವತಿ ದುಷ್ಟವಧಸ್ತನಯೈರ್ಯುತಃ ಖಲಗೈರ್ದಯಿತಾ ಪರಿಪಾಲಕಃ ॥

ಸಪ್ತಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಪುತ್ರರು, ಭಾಗ್ಯ, ಸೌಖ್ಯ, ಸುಖ ಲಭಿಸುತ್ತದೆ, ಪಾಪಗ್ರಹರಿಂದ ಕೂಡಿದಾಗ ದುಷ್ಟನು, ವಧ(ಕೊಲ್ಲುವುದು), ಪುತ್ರರಿಂದ ಕೂಡಿದವನು ಮತ್ತು ಪತ್ನಿಯಪಾಲನೆ ಮಾಡುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನ ವಿವಾಹವು ನಿಷ್ಕರ್ಷೆಯಾಗಿ ಬಿಟ್ಟುಹೋಗುತ್ತದೆ, ಅನಂತರ ಸಂಬಂಧ ಉಳ್ಳ ಕನ್ಯೆಯೊಂದಿಗೆ ವಿವಾಹ ಆಗುತ್ತದ, ಒಂದು ಸಂತಾನ ನಷ್ಟಯೋಗ ಇರುತ್ತದೆ, ಜಾತಕನು ಶೀಘ್ರ ಆಲೋಚನೆಯಿಂದ ಕಾರ್ಯನಿರ್ವಹಿಸಿ, ಅನಂತರ ಮಾಡಿದ ಕಾರ್ಯ ನಿರ್ವಹಣೆ ತೃಪ್ತಿಕರವಲ್ಲ ಎಂದು ಆತನಿಗೆ ಕಂಡು ಬರುತ್ತದೆ, ಆದ್ದರಿಂದ ಚಿಂತಿತ ವಿಚಾರ, ಕಾರ್ಯಾದಿ ಪುನಃ ಪರಿಶೀಲಿಸಿ ನಿರ್ವಹಿಸಿದಲ್ಲಿ ಉತ್ತಮಫಲ ಲಭಿಸುತ್ತದೆ, ಮಕ್ಕಳು ಬುದ್ಧಿವಂತರು, ವಿದ್ಯಾವಂತರು ಮತ್ತು ಅಭಿವೃದ್ಧಿ ಹೊಂದುತ್ತಾರೆ.

## ೭೮. ಷಷ್ಠಭಾವಗತ ಸಪ್ತಮೇಶಫಲ

**ಪರಾಶರಹೋರಾ**

> ದಾರೇಶೇ ರಿಪುಭಾವಸ್ಥೇ ಭಾರ್ಯಾ ತಸ್ಯ ರುಜಾನ್ವಿತಾ ।
> ಸ್ತ್ರಿಯಾ ಸಹಾಽಥ ವಾ ವೈರಂ ಸ್ವಯಂ ಕ್ರೋಧಿ ಸುಖೋಜ್ಝಿತಃ ॥

ಸಪ್ತಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ರೋಗದಿಂದ ಪೀಡಿತಳು ಮತ್ತು ಜಾತಕನು ಅವಳೊಂದಿಗೆ ವೈರತ್ವ ಉಳ್ಳವನು, ಸ್ವತಃ ಕೋಪಿಷ್ಠನು ಹಾಗೂ ಸುಖದಿಂದ ವಂಚಿತನು ಆಗಿರುತ್ತಾನೆ.

**ಮಾನಸಾಗರೀ**

> **ರಿಪುಗೃಹಗಃ ಕಾಂತೇಶಃ ಪ್ರಿಯಯಾ ಸಹ ವೈರಿಣಂ ಸರುಗ್ಭಾರ್ಯಮ್ ।**
> **ದಯಿತಾಸಙ್ಗಕ್ಷಯಿಣಂ ಕ್ರೂರಃ ಕುರುತೇ ಚ ಮೃತ್ಯುಪದಮ್ ॥**

ಸಪ್ತಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ತನ್ನ ಪತ್ನಿಯೊಂದಿಗೆ ಶತ್ರುತ್ವ ಉಂಟಾಗುತ್ತದೆ, ಮತ್ತು ಪತ್ನಿಯು ರೋಗಿಯಾಗುತ್ತಾಳೆ, ಸಪ್ತಮಾಧಿಪತಿಯು ಕ್ರೂರಗ್ರಹನಾದರೆ ಜತಕನು ಸ್ತ್ರೀ ಸಂಗದಿಂದ ಕ್ಷೀಣನಾಗುತ್ತಾನೆ ಅಥವಾ ರೋಗಪೀಡಿತನಾಗಿ ಮರಣ ಹೊಂದುತ್ತಾನೆ.

**ಯವನಜಾತಕ**

> **ಗತವಯಾ ವಿಪದಾಂ ತು ನಿಷೇವಕೋ ರಿಪುಗತೇ ರುಚಿರಂ ಹಿ ಚಿರಂ ವಪುಃ ।**
> **ಮದಪತೌ ದಯಿತಾದಯಿತಃ ಖಲು ಕ್ಷಯಗದೇನ ಯುತಃ ಖಲಖೇಚರೈಃ ॥**

ಸಪ್ತಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಆಯುಷ್ಯಹೀನನು, ವಿಪತ್ತಿನಿಂದ ಕೂಡಿದವನು, ಮನೋಹರದೇಹದವನು, ಮತ್ತು ಪತ್ನಿಯ ಪ್ರಿಯನು ಆಗುತ್ತಾನೆ, ಸಪ್ತಮೇಶನು ಕ್ರೂರಗ್ರಹರಿಂದ ಯುತನಾದರೆ ಜಾತಕನು ಕ್ಷಯರೋಗದಿಂದ ಕೂಡಿದವನು ಆಗುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಆಗ್ಗಾಗ್ಗೆ ನಿಃಶಕ್ತಿ ಮತ್ತು ಅನಾರೋಗ್ಯದಿಂದ ಪೀಡಿಸಲ್ಪಡುತ್ತಾಳೆ, ಜಾತಕನು ಅವಳನ್ನು ತುಚ್ಛೀಕರಿಸುತ್ತಾನೆ, ದಂಪತಿಗಳಲ್ಲಿ ವಾದ-ವಿವಾದ ಇರುತ್ತದೆ, ಸಪ್ತಮೇಶನು ಪಾಪಗ್ರಹನಾದರೆ ದಾಂಪತ್ಯ ವಿರಸ, ವಾದ-ವಿವಾದ, ಅನಂತರ ವಿವಾಹ-ವಿಚ್ಛೇದನ ಕ್ಕೋಸ್ಕರ ಕೋರ್ಟು ವ್ಯವಹಾರ ಇತ್ಯಾದಿಯಿಂದ ಧನ-ನಾಶ ಆಗುತ್ತದೆ, ಪಾಲುವ್ಯಾಪಾರದಲ್ಲಿ ಜಾತಕನಿಗೆ ಪಾಲುದಾರರಿಂದ ಹಾನಿ ಸಂಭವಿಸುತ್ತದೆ, ಜ್ಯಾಮೀನು ವ್ಯವಹಾರದಲ್ಲಿ ಸಿಲುಕಿ ನಷ್ಟಕ್ಕೀಡಾಗುತ್ತಾರೆ. ಇವರು ಸೈನ್ಯ, ವಕೀಲವೃತ್ತಿ ಮತ್ತು ಪತ್ತೇದಾರಿ ಕೆಲಸಗಳಲ್ಲಿ ಸಂಶೋಧನೆಯಲ್ಲಿ ಯಶಸ್ವಿಯಾಗಿ ಅಭಿವೃದ್ಧಿ ಹೊಂದುತ್ತಾರೆ.

# ೭೯. ಸಪ್ತಮಭಾವಗತ ಸಪ್ತಮೇಶಫಲ

**ಪರಾಶರಹೋರಾ**

> ದಾರೇಶೇ ಸಪ್ತಮೇ ಭಾವೇ ಜಾತೋ ದಾರಸುಖಾನ್ವಿತಃ ।
> ಧೀರೋ ವಿಚಕ್ಷಣೋ ಧೀಮಾನ್ ಕೇವಲಂ ವಾತರೋಗವಾನ್ ॥

ಸಪ್ತಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಪತ್ನಿಯೊಂದಿಗೆ ಸುಖವಂತನಾಗಿರುತ್ತಾನೆ, ಧೈರ್ಯವಂತನು, ವಿದ್ವಾಂಸನು, ನಿಪುಣನು, ಬುದ್ಧಿವಂತನು ಆದರೆ ಕೇವಲ ವಾತರೋಗ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

> ಸಪ್ತಮಪಃ ಸಪ್ತಮಗಃ ಪರಮಾಯುಃ ಪ್ರೀತಿವತ್ಸಲಃ ಪುರುಷಃ ।
> ನಿರ್ಮಲ ಶೀಲಸಮೇತಸ್ತೇಜಸ್ವೀ ಜಾಯತೇ ಜಾತಃ ॥

ಸಪ್ತಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಪರಮಾಯು ಯೋಗ (120 ವರ್ಷ 5 ದಿನ ಆಯುರ್ದಾಯ) ಆಗುತ್ತದೆ, ಮಕ್ಕಳಲ್ಲಿ ಪ್ರೀತಿ-ಮಮತೆ ಉಳ್ಳವನು, ರಾಗದ್ವೇಷಾದಿ ದೋಷವಿಲ್ಲದವನು, ಸದ್ಗುಣವಂತನು, ಹಾಗೂ ತೇಜಸ್ವಿಯೂ ಆಗುತ್ತಾನೆ.

**ಯವನಜಾತಕ**

> ಪ್ರಮದಭಾವಪತೌ ನಿಜಮಂದಿರೇ ಗತರುಜಂ ಹಿ ನರಂ ಪರಮಾಯುಷಮ್ ।
> ಪರುಷವಾಗ್ರಹಿತೋ ಹ್ಯತಿಶೀಲವಾನ್ಭವತಿ ಕೀರ್ತಿಯುತಃ ಪರದಾರಗಃ ॥

ಸಪ್ತಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ರೋಗರಹಿತನಾಗಿ ಪರಮಾಯುಷ ಉಳ್ಳವನು ಆಗುತ್ತಾನೆ, ಕಠೋರ ಮಾತುಗಳು ಇಲ್ಲದವನಾಗಿ ಅತಿ ಗುಣವಂತನು, ಕೀರ್ತಿವಂತನು ಮತ್ತು ಪರಸ್ತ್ರೀರತನು ಆಗುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ವಿದ್ಯಾವಂತನು, ಉತ್ತಮ ಆಡಳಿತಾಧಿಕಾರಿ. ಸಂಘ-ಸಂಸ್ಥೆಗಳಲ್ಲಿ ಉನ್ನತ ಪದವಿಯಲ್ಲಿ ಇರುತ್ತಾನೆ, ಜಾತಕನು ಆರೋಗ್ಯವಂತನು, ದೀರ್ಘಾಯುಷ್ಯ

ಉಳ್ಳವನು, ಕೀರ್ತಿವಂತನು ವಿಷಯಾಭಿಲಾಷಿಯು ಆಗಿರುತ್ತಾನೆ, ಸಪ್ತಮವು ನಿರ್ವರ್ತಿಸ್ಥಾನ, ಇವರು ಕೈಕೊಂಡ ಕಾರ್ಯವನ್ನು ಸಫಲತೆಯಿಂದ ನಿರ್ವಹಿಸಿ ಕೀರ್ತಿವಂತರಾಗುತ್ತಾರೆ, ಬೃಹತ್ ಉದ್ಯಮಗಳನ್ನು ನಿರ್ವಹಿಸಿ ಧನ-ಸಂಪತ್ತನ್ನು ಗಳಿಸುತ್ತಾರೆ, ಅರ್ಥ ಮಹನೀಯವಾಗಿ ಸಮಾಜಸೇವೆ, ದೇವತಾರಾಧನೆ, ಸತ್ಕರ್ಮ ಸದ್ವಿನಿಯೋಗ ಮಾಡುತ್ತಾನೆ.

## ೮೦. ಅಷ್ಟಮಭಾವಗತ ಸಪ್ತಮೇಶಫಲ

**ಪರಾಶರಹೋರಾ**

**ದಾರೇಶೇ ಮೃತ್ಯುಭಾವಸ್ಥೇ ಜಾತೋ ದಾರಸುಖೋಜ್ಝಿತಃ ।**
**ಭಾರ್ಯಾಪಿ ರೋಗಯುಕ್ತಾऽಸ್ಯ ದುಃಶೀಲಾऽಪಿ ನ ಚಾನುಗಾ ॥**

ಸಪ್ತಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ದಾಂಪತ್ಯ ಸುಖವಿಲ್ಲದವನು, ಆತನ ಪತ್ನಿಯು ರೋಗಪೀಡಿತಳು, ದುಷ್ಟಳು ಮತ್ತು ಪತಿಯ ಮಾತಿನಂತೆ ನಡೆಯದವಳು ಆಗಿರುತ್ತಾಳೆ.

**ಮಾನಸಾಗರೀ**

**ಸಪ್ತಮಪತಿರ್ನಿಧನಗತೋ ಗಣಿಕಾಸು ರತಃ ಕರಗ್ರಹರಹಿತಃ ।**
**ನಿತ್ಯಂ ಚಿಂತಾಯುಕ್ತೋ ಮನುಜಃ ಕಿಲ ಜಾಯತೇ ದುಃಖೀ ॥**

ಸಪ್ತಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ವೇಶ್ಯಾ ಸ್ತ್ರೀಯರಲ್ಲಿ ಅನುರಕ್ತನು, ವಿವಾಹರಹಿತನು, ಚಿಂತಾಯುಕ್ತನು ಹಾಗೂ ದುಃಖಿತನು ಆಗುತ್ತಾನೆ.

**ಯವನಜಾತಕ**

**ನಿಧನಗೇ ತು ಕಲತ್ರಪತೌ ನರಃ ಕಲಹಕೃದ್‌ಗೃಹಿಣೀಸುಖವರ್ಜಿತಃ ।**
**ದಯಿತಯಾ ನಿಜಯಾ ನ ಸಮಾಗಮೋ ಯದಿ ಭವೇದಥವಾ ಮೃತಭಾರ್ಯಕಃ ॥**

ಸಪ್ತಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕಲಹವಂತನು

ದಾಂಪತ್ಯಸುಖವಿಲ್ಲದವನು, ತನ್ನ ಪತ್ನಿಯೊಂದಿಗೆ ಸಮಾಗಮ ಮಾಡದವನು ಅಥವಾ ಆತನ ಪತ್ನಿಯ ಮರಣ ಆಗುತ್ತದೆ.

ಅನುಭವದಲ್ಲಿ - ಸಪ್ತಮಾಧಿಪತಿಯು ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ವಿವಾಹ ನಿಷ್ಕರ್ಷೆಯಾಗಿ ಬಿಟ್ಟು ಹೋಗುತ್ತದೆ, ದಾಂಪತ್ಯಸುಖ ತೃಪ್ತಿಕರವಲ್ಲ, ಪತ್ನಿಯ ಆರೋಗ್ಯ ಉತ್ತಮವಿಲ್ಲ, ಕೋಪ ಹಠತನ ಮತ್ತು ವಾದವನ್ನೇ ಸಮರ್ಥಿಸುತ್ತಾಳೆ, ಜಾತಕನು ವಿಷಯಾಭಿಲಾಷಿ, ವಿವಾಹದಲ್ಲಿ ವಿಳಂಬ, ಶುಕ್ರನು ದೂಷಿತನಾದರೆ ದ್ವಿಭಾರ್ಯಾಯೋಗ ಸಂಭವಿಸುತ್ತದೆ, ಜಾತಕನು ಕರ್ಮಕ್ಷೇತ್ರದಲ್ಲಿ ಬುದ್ಧಿವಂತಿಕೆ ಮತ್ತು ಪರಿಶ್ರಮದಿಂದ ದುಡಿದು ಉನ್ನತ ಪದವಿ ಹೊಂದುತ್ತಾನೆ.

## ೮೧. ನವಮಭಾವಗತ ಸಪ್ತಮೇಶಫಲ

**ಪರಾಶರಹೋರಾ**

**ದಾರೇಶೇ ಧರ್ಮಭಾವಸ್ಥೇ ನಾನಾಸ್ತ್ರೀಭಿಃ ಸಮಾಗಮಃ ।**
**ಜಾಯಾಹೃತಮನಾ ಜಾತೋ ಬಹ್ವಾರಂಭಕರೋ ನರಃ ॥**

ಸಪ್ತಮೇಶನು ನವಮಭಾವದಲ್ಲಿ ಇದ್ದಾಗ ಜಾತಕನ ಸಮಾಗಮ ಅನೇಕ ಸ್ತ್ರೀಯರೊಂದಿಗೆ ಆಗುತ್ತದೆ, ತನ್ನ ಪತ್ನಿಯಲ್ಲಿ ಅನುರಕ್ತನು ಮತ್ತು ಅನೇಕ ಕಾರ್ಯಗಳನ್ನು ಕೈಗೊಳ್ಳುತ್ತಾನೆ.

**ಮಾನಸಾಗರೀ**

**ಸುಕೃತಗತೇ ಸಪ್ತಮಪೇ ತೇಜೋವಾಂಶೀಲವಾನ್ ಪ್ರಿಯಾಽಪ್ಯೇವಮ್**
**ಕ್ರೂರೇ ಷಣ್ಢವಿರೂಪಾ ಲಗ್ನೇಶೋ ವಿಕ್ಷಿತೇ ನಯೇ ಪ್ರಬಲಃ ॥**

ಸಪ್ತಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತೇಜಸ್ವಿಯು ಸದ್ಗುಣವಂತನು ಮತ್ತು ಸಮಾನಗುಣಉಳ್ಳ ಪತ್ನಿಯನ್ನು ಪಡೆಯುತ್ತಾನೆ, ಸಪ್ತಮಾಧಿಪತಿಯು ಕ್ರೂರಗ್ರಹನಾದರೆ ಜಾತಕನು ಕುರೂಪಿಯು ಅಥವಾ ನಪುಂಸಕನು ಆಗುತ್ತಾನೆ. ಸಪ್ತಮಾಧಿಪತಿಯನ್ನು ಲಗ್ನಾಧಿಪತಿ ನೋಡಿದರ ಜಾತಕನು ನೀತಿಶಾಸ್ತ್ರ ಕುಶಲನು ಆಗುತ್ತಾನೆ.

**ಯವನಜಾತಕ**

> **ಮದಪತಿರ್ನವಮೇ ಯದಿ ಶೀಲವಾನ್ ಖಲಖಗೈಃ ಕುರುತೇ ಹಿ ನಪುಂಸಕಮ್ ।**
> **ತಪಸಿ ತೇಜಸಿ ಸುಪ್ರಥಿತೋ ನರಃ ಪ್ರಮದಯಾ ನಿಜಯಾ ಸಹ ವೈರಕೃತ್ ॥**

ಸಪ್ತಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಶೀಲವಂತನು, ಪಾಪಗ್ರಹನಾದರೆ ನಪುಂಸಕನಾಗುತ್ತಾನೆ, ತಪಸ್ಸು ಮತ್ತು ತೇಜಸ್ಸಿನಿಂದ ಪ್ರಸಿದ್ಧನು ಆಗುತ್ತಾನೆ, ಪತ್ನಿಯೊಂದಿಗೆ ವೈರತ್ವ ಮಾಡುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಭಾಗ್ಯವಂತನು ಹಾಗೂ ಸದ್ಗುಣವಂತಳಾದ ಪತ್ನಿ, ದಂಪತಿಗಳಲ್ಲಿ ಉತ್ತಮ ದಾಂಪತ್ಯಸುಖ ಮತ್ತು ಅನ್ಯೋನ್ಯತೆ ಇರುತ್ತದೆ, ವಿವಾಹದ ನಂತರ ಭಾಗ್ಯೋದಯ ಆಗುತ್ತದೆ, ಗುರುಹಿರಿಯರ ಸೇವೆ ಮತ್ತು ಭಕ್ತಿ, ದೇವರ ಪೂಜೆ, ಸೇವೆ ಇತ್ಯಾದಿ ಮಾಡುತ್ತಾರೆ, ಇದರಿಂದ ಭಾಗ್ಯೋದಯವಾಗಿ ಉತ್ತಮ ಸಂತಾನ, ಸುಖ-ಸಂತೋಷ ಹಾಗೂ ಅಭಿವೃದ್ಧಿ ಹೊಂದುತ್ತಾನೆ.

## ೮೨. ದಶಮಭಾವಗತ ಸಪ್ತಮೇಶಫಲ

**ಪರಾಶರಹೋರಾ**

> **ದಾರೇಶೇ ಕರ್ಮಭಾವಸ್ಥೇ ನಾಸ್ಯ ಜಾಯಾ ವಶಾನುಗಾ ।**
> **ಸ್ವಯಂ ಧರ್ಮರತೋ ಜಾತೋ ಧನಪುತ್ರಾದಿಸಂಯುತಃ ॥**

ಸಪ್ತಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಆತನ ವಶ ಇರುವುದಿಲ್ಲ, ಧರ್ಮರತನು ಮತ್ತು ಧನ, ಪುತ್ರರು ಇತ್ಯಾದಿಯಿಂದ ಕೂಡಿದವನು ಆಗುತ್ತಾನೆ.

**ಮಾನಸಾಗರೀ**

> **ಸಪ್ತಮಪೇ ದಶಮಸ್ಥೇ ನೃಪದೋಷೀ ಲಂಪಟಃ ಕಪಟಚಿತ್ತಃ ।**
> **ಕ್ರೂರೇ ದುಃಖಾರ್ತಃ ಸ್ಯಾಚ್ಛತ್ರೋರ್ವಂಶಗೋ ಭವೇತ್ಪುರುಷಃ ॥**

ಸಪ್ತಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜದೋಷಿಯು, ಲಂಪಟನು, ಹೃದಯದಲ್ಲಿ ಕಪಟತೆ ಉಳ್ಳವನು ಆಗುತ್ತಾನೆ, ಸಪ್ತಮೇಶನು ಕ್ರೂರಗ್ರಹನಾದರೆ ದುಃಖದಿಂದ ಪೀಡಿತನು ಮತ್ತು ಶತ್ರುವಿನ ವಶನಾಗುತ್ತಾನೆ.

**ಯವನಜಾತಕ**

> **ದಶಮಗೇ ಮದಪೇ ನೃಪದೋಷದಃ ಕುವಚನಃ ಕಪಟೀ ಚಪಲೋ ನರಃ ।**
> **ಶ್ವಶುರದುಷ್ಟಜನಾನುಚರಃ ಖಲೈರ್ನಿಜವಧೂಜನಯೋರ್ನಹಿ ಹರ್ಷಕೃತ್ ॥**

ಸಪ್ತಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನನ್ನು ದೂಷಿಸುತ್ತಾನೆ, ಕೆಟ್ಟಮಾತುಗಳನ್ನು ಆಡುತ್ತಾನೆ, ಕಪಟಿಯು, ಚಂಚಲತೆ ಉಳ್ಳವನು ಆಗುತ್ತಾನೆ, ಪಾಪಗ್ರಹನಿಂದ ಕೂಡಿದ್ದರೆ ಮಾವ ಮತ್ತು ದುಷ್ಟ ಜನರ ಅನುಚರನು ಆಗುತ್ತಾನೆ, ತನ್ನ ಪತ್ನಿ ಮತ್ತು ಸಂಭಂಧಿಕರೊಂದಿಗೆ ಸಂತೋಷ ಇಲ್ಲದವನು ಆಗುತ್ತಾನೆ.

ಅನುಭವದಲ್ಲಿ - ಸಪ್ತಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಉತ್ತಮ ಉದ್ಯಮದಲ್ಲಿ ಇರುತ್ತಾಳೆ, ಕುಶಲವಾಗಿ ಆಡಳಿತ ನಿರ್ವಹಿಸುತ್ತಾಳೆ, ಸಂತಾನಸುಖ ಇರುತ್ತದೆ, ಜಾತಕನು ಆಯಾಕಾಲದಲ್ಲಿ ಜರಗುವ ಧಾರ್ಮಿಕ ಕಾರ್ಯದ ಆಚರಣೆ ಮಾಡುತ್ತಾನೆ, ವಿವಾಹದ ನಂತರ ಇವರು ಅಭಿವೃದ್ಧಿಹೊಂದಿ, ನೂತನ ಉದ್ಯಮ ಕಾರ್ಯಗತಗೊಳಿಸಿ ಬುದ್ಧಿವಂತಿಕೆ ಮತ್ತು ಪರಿಶ್ರಮದಿಂದ ದುಡಿದು ಧನ-ಸಂಪತ್ತನ್ನು ಗಳಿಸುತ್ತಾರೆ, ಜಾತಕನು ತನ್ನ ಪತ್ನಿ ಮತ್ತು ಮಾವನ ಮನೆಯವರೊಂದಿಗೆ ಅಸಂತುಷ್ಟನು ಆಗಿರುತ್ತಾನೆ.

## ೮೩. ಏಕಾದಶಭಾವಗತ ಸಪ್ತಮೇಶಫಲ

**ಪರಾಶರಹೋರಾ**

> **ದಾರೇಶೇ ಲಾಭಭಾವಸ್ಥೇ ದಾರೈರರ್ಥಸಮಾಗಮಃ ।**
> **ಪುತ್ರಾದಿಸುಖಮಲ್ಪಂ ಚ ಜನಃ ಕನ್ಯಾಪ್ರಜೋ ಭವೇತ್ ॥**

ಸಪ್ತಮೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನಿಗೆ ಪತ್ನಿಯಿಂದ

ಧನ ಲಭಿಸುತ್ತದೆ, ಪುತ್ರಾದಿಯಿಂದ ಅಲ್ಪಸುಖ ಲಭಿಸುತ್ತದೆ. ಹೆಣ್ಣು ಸಂತತಿ ಜನಿಸುತ್ತದೆ.

**ಮಾನಸಾಗರೀ**

**ಲಾಭಸ್ಥೇ ಜಾಯೇಶೇ ಭಕ್ತಾರೂಪಾನ್ವಿತಾ ಸುಶೀಲಾ ಚ ।**
**ದಯಿತಾ ಪರಿಣೀತಾ ಸ್ಯಾನ್ನರಸ್ಯ ನನು ಜಾಯತೇ ಸತತಮ್ ॥**

ಸಪ್ತಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನ ವಿವಾಹಿತ ಪತ್ನಿಯು ನಿಷ್ಠಾವಂತಳು, ರೂಪವಂತಳು, ಸದ್ಗುಣವಂತಳು ಹಾಗೂ ಪತಿಯ ಆಜ್ಞೆಯಂತೆ ನಡೆಯುತ್ತಾಳೆ.

**ಯವನಜಾತಕ**

**ಭವಗತೇ ತು ಕಲತ್ರಪತೌ ಸದಾ ಸ್ವದಯಿತಾ ಪ್ರಿಯಕೃಚ್ಚ ತಥಾ ಸತೀ ।**
**ಅನುಚರೀ ಸ್ವಧವಸ್ಯ ಸುಶೀಲಿನೀ ವಸುಮತೀ ಕಲನಾ ಪಿತೃಸಂಶಯಾ ॥**

ಸಪ್ತಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ ತನ್ನ ಪತ್ನಿಯಿಂದ ಪ್ರೀತಿಸಲ್ಪಡುತ್ತಾನೆ, ಪತಿಯನ್ನು ಅನುಸರಿಸುವವಳು, ಸದಾಚಾರ-ಸದ್ಗುಣವಂತಳು, ಧನವಂತಳು ಮತ್ತು ಅವಳಿಗೆ ತನ್ನ ತಂದೆಯ ವಿಷಯದಲ್ಲಿ ಸಂದೇಹ ಇರುತ್ತದೆ.

ಅನುಭವದಲ್ಲಿ - ಸಪ್ತಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಸೌಂದರ್ಯವತಿಯು, ಉತ್ತಮ ಗುಣವಂತಳು, ಪತಿಯನ್ನು ಅನುಸರಿಸುವವಳು ಆಗುತ್ತಾಳೆ, ಜಾತಕನು ಸಂತಾನಸುಖ ಉಳ್ಳವನು, ಪಾಲುವ್ಯಾಪಾರದಿಂದ ಲಾಭ ಗಳಿಸುತ್ತಾರೆ, ಇವರು ಉದ್ಯೋಗಕ್ಷೇತ್ರದಲ್ಲಿ ದಕ್ಷ ಆಡಳಿತಗಾರರು ಆಗುತ್ತಾರೆ, ಸ್ವಾರ್ಜಿತವಿತ್ತ, ಭೂಮಿ, ಗೃಹ ಲಭಿಸುತ್ತದೆ, ಸಪ್ತಮೇಶನು ಪಾಪಗ್ರಹನಾದರೆ ಜಾತಕನು ಲಾಭದ ಕೆಲ ಅಂಶವನ್ನು ಕಳಕೊಳ್ಳುತ್ತಾನೆ.

# ೮೪. ವ್ಯಯಭಾವಗತ ಸಪ್ತಮೇಶಫಲ

**ಪರಾಶರಹೋರಾ**

> ದಾರೇಶೇ ವ್ಯಯಗೇ ಜಾತೋ ದರಿದ್ರಃ ಕೃಪಣೋಽಪಿವಾ ।
> ಭಾರ್ಯಾಽಪಿ ವ್ಯಯಶೀಲಾಽಸ್ಯ ವಸ್ತ್ರಾಜೀವೀ ನರೋಭವೇತ್ ॥

ಸಪ್ತಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಬಡತನ ದರಿದ್ರತೆ ಅಥವಾ ಕೃಪಣತ್ವ ಇರುತ್ತದೆ, ಜಾತಕನ ಪತ್ನಿಯು ಕೂಡಾ ಖರ್ಚು ಮಾಡುವವಳು ಆಗಿರುತ್ತಾಳೆ.

**ಮಾನಸಾಗರೀ**

> ಸಪ್ತಮಪೇ ದ್ವಾದಶಗೇ ಗೃಹಬಂಧುರತೋ ನ ವಾ ಭವೇದ್ಭಾರ್ಯಾ ।
> ಸಾ ಲೋಲಾ ದುಷ್ಟಯುತಾ ದೂರಾಚ್ಚಲತಿ ಚ ತಸ್ಯ ಪುರುಷಸ್ಯ ॥

ಸಪ್ತಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ತನ್ನ ಮನೆ ಮತ್ತು ಬಂಧುಗಳೊಂದಿಗೆ ಇರುತ್ತಾನೆ, ಅಥವಾ ಪತ್ನಿಯೊಂದಿಗೆ ಇರುತ್ತಾನೆ, ಅವನ ಕಮ್ಮಿ ಪ್ರಾಯದ ಪತ್ನಿಯು ಚಂಚಲಸ್ವಭಾವದವಳು, ದುಷ್ಟಳು ಹಾಗೂ ಪತಿಯಿಂದ ದೂರ ಇರುತ್ತಾಳೆ.

**ಯವನಜಾತಕ**

> ಮದಪತಿರ್ವ್ಯಯಗಸ್ತನುತೇ ವ್ಯಯಂ ಸ್ವದಯಿತಾಗೃಹಬಂಧುವಿವರ್ಜಿತಃ ।
> ಭವತಿ ಲೌಲ್ಯವತೀ ಖಿಲವಾಕ್ಯದಾ ವ್ಯಯಪರಾ ಗೃಹತಸ್ಕರಯುಕ್ತಾ ॥

ಸಪ್ತಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಬಹಳ ವ್ಯಯ ಆಗುತ್ತದೆ. ಜಾತಕನು ಗೃಹ, ಬಂಧು ಮತ್ತು ಪತ್ನಿಯಿಂದ ತ್ಯಜಿಸಲ್ಪಡುತ್ತಾನೆ. ಅವನ ಪತ್ನಿಯು ಚಂಚಲ ಸ್ವಭಾವದವಳು, ಕಟುವಾದ ಮಾತುಗಳನ್ನು ಆಡುವವಳು, ಖರ್ಚು ಮಾಡುವವಳು, ಮತ್ತು ಮನೆಯಲ್ಲಿ ಕಳ್ಳರಿಂದ ಕೂಡಿರುತ್ತಾಳೆ.

ಅನುಭವದಲ್ಲಿ - ಸಪ್ತಮೇಶನು ವ್ಯಯಭಾವದಲ್ಲಿ ಇದ್ದಾಗ ವಿವಾಹದಲ್ಲಿ

ವಿಳಂಬ ಅಥವಾ ಅಡಚಣೆ ಇರುತ್ತದೆ, ಸಪ್ತಮೇಶನು ಪಾಪಗ್ರಹನಾದರೆ ವಿವಾಹದಲ್ಲಿ ಅಧಿಕ ಖರ್ಚು, ಉದ್ಯೋಗ ಕ್ಷೇತ್ರದಲ್ಲಿ ಅಧಿಕ ಹಾಗೂ ಅನಾವಶ್ಯಕ ಖರ್ಚು ಸಂಭವಿಸುತ್ತದೆ ಅಥವಾ ನಷ್ಟ ಸಂಭವಿಸುತ್ತದೆ, ಪತಿ-ಪತ್ನಿ ಇಬ್ಬರೂ ಅಧಿಕ ಖರ್ಚು ಮಾಡುವುದರಿಂದ ಆರ್ಥಿಕ ಒತ್ತಡ ಇರುತ್ತದೆ, ನೂತನ ಮನೆ ಕಟ್ಟಲು ಹಣ ವಿನಿಯೋಗಿಸುತ್ತಾನೆ, ಆದರೆ ನಿಷ್ಕರ್ಷಿತ ವೆಚ್ಚಕ್ಕಿಂತ ಹೆಚ್ಚು ಖರ್ಚು ಸಂಭವಿಸಿ ಕಟ್ಟಡ ನಿರ್ಮಾಣ ಪೂರ್ತಿಗೊಳಿಸಲು ಸಾಲಮಾಡ ಬೇಕಾಗುತ್ತದೆ, ಜಾತಕನ ತನ್ನ ಸಹದ್ಯೋಗಿಗಳಿಗೆ ಧನ ಸಹಾಯ ನೀಡಿ ಸಂಕಷ್ಟಕ್ಕೀಡಾಗುತ್ತಾರೆ, ಕಣ್ಣುನೋವು ಅಥವಾ ಕಾಲುನೋವಿನಿಂದ ಪೀಡಿಸಲ್ಪಡುತ್ತಾರೆ.

# ಲಗ್ನಾದಿಭಾವಗತ ಅಷ್ಟಮೇಶಫಲ

## ೮೫. ಲಗ್ನಗತ ಅಷ್ಟಮೇಶಫಲ

**ಪರಾಶರಹೋರಾ**

> **ಅಷ್ಟಮೇಶೇ ತನೌ ಜಾತಸ್ತನುಸೌಖ್ಯವಿವರ್ಜಿತಃ ।**
> **ದೇವಾನಾಂ ಬ್ರಾಹ್ಮಣಾನಾಂ ಚ ನಿಂದಕೋ ವ್ರಣಸಂಯುತಃ ॥**

ಅಷ್ಟಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ದೇಹ ಸೌಖ್ಯವಿಲ್ಲದವನು, ದೇವರ-ಬ್ರಾಹ್ಮಣರ ನಿಂದೆಯಲ್ಲಿ ನಿರತನು ಮತ್ತು ವ್ರಣದಿಂದ ಪೀಡಿತನು ಆಗುತ್ತಾನೆ.

**ಮಾನಸಾಗರೀ**

> **ಅಷ್ಟಮಪೇ ಲಗ್ನಗತೇ ಬಹುವಿಘ್ನೋ ದೀರ್ಘರೋಗಭೃತ್ಸ್ತೇನಃ ।**
> **ನೇಷ್ಟಾನುವಾದನಿರತಾ ಲಕ್ಷ್ಮೀಂ ಲಭತೇ ನೃಪತಿವಚಸಾ ॥**

ಅಷ್ಟಮೇಶನು ಲಗ್ನದಲ್ಲಿ ಇದ್ದಾಗ ಜಾತಕನಿಗೆ ಅನೇಕ ವಿಘ್ನಗಳು ಉಂಟಾಗುತ್ತವೆ, ದೀರ್ಘಕಾಲ ರೋಗಪೀಡೆ ಇರುತ್ತದೆ, ಕಳ್ಳನು, ಅಪ್ರಿಯಕಾರ್ಯದಲ್ಲಿ ನಿರತನು, ರಾಜನ ಆದೇಶದಿಂದ ಧನಪ್ರಾಪ್ತಿ ಆಗುತ್ತದೆ.

ಯವನಜಾತಕ

> ಮೃತಿಪತಿಸ್ತನುಗೋ ಬಹುದುಃಖಕೃದ್ಭವತಿ ವಾ ಬಹುರುಷ್ಟವಿವಾದಕೃತ್ ।
> ಯದಿ ನರೋ ನೃಪತೇರ್ಲಭತೇ ಧನಂ ಮದಯುತೋ ಬಹುದುಃಖಸಮನ್ವಿತಃ ॥

ಅಷ್ಟಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಬಹಳ ದುಃಖಿತನು ಆಗುತ್ತಾನೆ, ಅತಿ ಕೋಪಿಷ್ಠನು ಮತ್ತು ವಾದ-ವಿವಾದ ಮಾಡುವವನು ಆಗುತ್ತಾನೆ, ಆತನಿಗೆ ರಾಜನಿಂದ ಧನ ಲಭಿಸಿದರೆ ಅಹಂಕಾರದಿಂದ ಕೂಡಿದವನು ಮತ್ತು ಅತಿ ದುಃಖಿತನು ಆಗುತ್ತಾನೆ.

ಅನುಭವದಲ್ಲಿ - ಅಷ್ಟಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಬುದ್ಧಿವಂತನು, ಆದರೆ ಶೀಘ್ರ ನಿರ್ಣಯ ತೆಗೆದುಕೊಳ್ಳುವುದರಿಂದ ಕಾರ್ಯಹಾನಿ ಅಥವಾ ನಷ್ಟಕ್ಕೀಡಾಗುತ್ತಾನೆ, ಇವರು ತಮ್ಮ ನಿರ್ಣಯವನ್ನು ಎರಡನೇ ಬಾರಿ ವಿಮರ್ಶಿಸಿದರೆ ಉತ್ತಮ ರೀತಿಯಲ್ಲಿ ಕಾರ್ಯಸಾಧನೆ ಮಾಡಬಹುದು, ಅಷ್ಟಮೇಶನು ಪಾಪಗ್ರಹನಾದರೆ ಜಾತಕನಿಗೆ ಶೀಘ್ರಕೋಪ, ವಾದ-ವಿವಾದ, ಸ್ವಾಭಿಮಾನ, ಅನಾರೋಗ್ಯ, ಮೋಸ-ವಂಚನೆ ಅಥವಾ ಅಪ್ರಿಯಕಾರ್ಯಗಳನ್ನು ಮಾಡುತ್ತಾರೆ.

## ೮೬. ದ್ವಿತೀಯಭಾವಗತ ಅಷ್ಟಮೇಶಫಲ

ಪರಾಶರಹೋರಾ

> ಅಷ್ಟಮೇಶೇ ಧನೇ ಬಾಹುಬಲಹೀನಃ ಪ್ರಜಾಯತೇ ।
> ಧನಂ ತಸ್ಯ ಭವೇತ್ ಸ್ವಲ್ಪಂ ನಷ್ಟಂ ವಿತ್ತಂ ನ ಲಭ್ಯತೇ ॥

ಅಷ್ಟಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಬಾಹುಬಲಹೀನನು ಆಗುತ್ತಾನೆ, ಸ್ವಲ್ಪಧನ ಇರುತ್ತದೆ, ನಷ್ಟಧನ ಲಭಿಸುವುದಿಲ್ಲ.

ಮಾನಸಾಗರೀ

> ನಿಧನಪತೌ ಧನಲೀನೇಽಲ್ಪಜೀವೀ ವೈರಿಮಾನ್ನರಶ್ಚೌರಃ ।
> ಕ್ರೂರೇ ಸೌಮ್ಯೇಽತಿಶುಭಂ ಕಿಮು ಕ್ಷಿತಿಪಾಲತಾ ಮರಣಮ್ ॥

ಅಷ್ಟಮೇಶನು ಕ್ರೂರಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಅಲ್ಪಾಯುಷ್ಯದವನು, ಶತ್ರುಗಳು ಉಳ್ಳವನು, ಹಾಗೂ ಕಳ್ಳನು ಆಗುತ್ತಾನೆ.

ಅಷ್ಟಮೇಶನು ಶುಭಗ್ರಹನಾಗಿ ದ್ವಿತೀಯಭಾವದಲ್ಲಿ ಇದ್ದರೆ ಅತಿಶುಭಕರನು ಆಗುತ್ತಾನೆ, ಆದರೆ ರಾಜನದೆಸೆಯಿಂದ ಮರಣ ಆಗುತ್ತದೆ.

**ಯವನಜಾತಕ**

ನಿಧನಪೇ ಧನಗೇ ಚಲಜೀವಿತೋ ಬಹುಲಶಾಸ್ತ್ರಯುತೋಽಪಿ ಚ ತಸ್ಕರಃ ।
ಖಲಖಗೈಶ್ಚ ಶುಭಂ ನ ಗದಾನ್ವಿತೋ ನೃಪತಿತೋ ಮರಣಂ ಹಿ ಸುನಿಶ್ಚಿತಮ್ ॥

ಅಷ್ಟಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ ಸಂಚರಿಸಿ ಜೀವಿಸುತ್ತಾನೆ, ತುಂಬಾ ಶಾಸ್ತ್ರವನ್ನು ತಿಳಿದವನಾದರೂ ಕಳ್ಳನು ಆಗುತ್ತಾನೆ, ಅಷ್ಟಮಾಧಿಪತಿಯು ಪಾಪಗ್ರಹನಾದರೆ ಜಾತಕನು ರೋಗಿಯು ಆಗುತ್ತಾನೆ, ಹಾಗೂ ರಾಜನಿಂದ ಮರಣ ನಿಶ್ಚಯವಾಗಿ ಆಗುತ್ತದೆ.

ಅನುಭವದಲ್ಲಿ - ಅಷ್ಟಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಧನಸಂಪತ್ತಿನ ಪರಿಮಿತ ಇರುತ್ತದೆ, ಮಾತಿನಿಂದ ಕಲಹ ಸಂಭವಿಸುತ್ತದೆ, ಕುಟುಂಬೀಯರಿಗೆ ಧನಸಹಾಯ ನೀಡಿ, ಅವರಿಂದ ಹಿಂದಕ್ಕೆ ಪಡೆಯದೆ ಸಂಕಷ್ಟಕ್ಕೀಡಾಗುತ್ತಾನೆ, ವಾಕ್‌ಚಾತುರ್ಯ ಉಳ್ಳವನು, ಸಂಚಾರ ಉದ್ಯಮ ನಿರ್ವಹಿಸುತ್ತಾನೆ. ಅಷ್ಟಮೇಶನು ಪಾಪಗ್ರಹನಾದರೆ ಜಾತಕನು ಅನಾರೋಗ್ಯ ಉಳ್ಳವನು, ಶಾಸ್ತ್ರ ವಿರುದ್ಧ ವರ್ತನೆ ಉಳ್ಳವನು ಆಗುತ್ತಾನೆ.

## ೮೭. ತೃತೀಯಭಾವಗತ ಅಷ್ಟಮೇಶಫಲ

**ಪರಾಶರಹೋರಾ**

ರಂಧ್ರೇಶೇ ಸಹಜೇ ಭಾವೇ ಭ್ರಾತೃಸೌಖ್ಯಂ ನ ಜಾಯತೇ ।
ಸಾಲಸ್ಯೋ ಭೃತ್ಯಹೀನಸ್ಯ ಜಾಯತೇ ಬಲವರ್ಜಿತಃ ॥

ಅಷ್ಟಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಸಹೋದರರ

ಸುಖ ಇರುವುದಿಲ್ಲ, ಜಾತಕನು ಆಲಸಿಯು, ಸೇವಕರು ಇಲ್ಲದವನು ಮತ್ತು ಬಲ ಇಲ್ಲದವನು ಆಗುತ್ತಾನೆ.

ಮಾನಸಾಗರೀ

> ಅಷ್ಟಮಪತೌ ತೃತೀಯೇ ಬಂಧುವಿರೋಧೀ ಸುಹೃದ್ವಿರೋಧೀ ಚ ।
> ವ್ಯಂಗೋ ದುರ್ವಾಗ್ಲೋಲಃ ಸೋದರರಹಿತೋ ಭವತ್ಕಥ ವಾ ॥

ಅಷ್ಟಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಬಂಧು-ಬಾಂಧವರು ಮತ್ತು ಮಿತ್ರರೊಂದಿಗೆ ವಿರೋಧ ಮಾಡುತ್ತಾನೆ, ಕಡೆಗಣ್ಣು ಅಥವಾ ಅಂಗವಿಹೀನನು, ಕೆಟ್ಟ ಅಥವಾ ಕಟುವಾದ ಮಾತುಗಳನ್ನು ಆಡುವವನು, ಚಂಚಲಸ್ವಭಾವ ಮತ್ತು ಸಹೋದರರು ಇರುವುದಿಲ್ಲ.

ಯವನಜಾತಕ

> ಸಹಜಗೇಽಷ್ಟಮಪೇ ಸಹಜೈಃ ಸ್ವಯಂ ಸ ಚ ವಿರೋಧಕರೋಥ ಸುಹೃಜ್ಜನೈಃ ।
> ಕಠಿನ ವಾಕ್ಯ ಪರಶ್ಚಪಲಃ ಖಲೋ ಭವತಿ ಬಂಧುಜನೇನ ವಿವರ್ಜಿತಃ ॥

ಅಷ್ಟಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರಿಂದ ಮತ್ತು ಮಿತ್ರರೊಂದಿಗೆ ವಿರೋಧ ಮಾಡುತ್ತಾನೆ, ಕಠಿಣವಾದ ಮಾತುಗಳನ್ನು ಆಡುತ್ತಾನೆ, ಚಂಚಲ ಸ್ವಭಾವದವನು ಮತ್ತು ದುಷ್ಟರಾದ ಬಂಧುಜನರಿಂದ ಹೀನೈಸಲ್ಪಡುತ್ತಾನೆ.

ಅನುಭವದಲ್ಲಿ – ಅಷ್ಟಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನಿಗೆ ಸಹೋದರರು ಇರುವುದಿಲ್ಲ, ಅಥವಾ ಸಹೋದರರೊಂದಿಗೆ ಕಲಹ, ವಿರಹ ಅಥವಾ ಸಹೋದರರನ್ನು ಕಳೆಕೊಳ್ಳುತ್ತಾನೆ, ಅಷ್ಟಮೇಶನು ಪಾಪಗ್ರಹನಾದರೆ ಜಾತಕನಿಗೆ ಸಹೋದರರೊಂದಿಗೆ ಕಲಹ ಮತ್ತು ಕೋರ್ಟು ವ್ಯವಹಾರ ಸಂಭವಿಸುತ್ತದೆ, ಕೈಕೊಂಡ ಕಾರ್ಯಗಳನ್ನು ಮುಂದೂಡುವ ಪ್ರವೃತ್ತಿ ಇರುವುದರಿಂದ ಆರ್ಥಿಕ ಹಾನಿ ಸಂಭವಿಸುತ್ತದೆ, ಕೈ ನೋವು ಅಥವಾ ಕೈ ಊನ ಇರುತ್ತದೆ, ಬಂಧು-ಬಾಂಧವರಿಂದ ದೂಷಿಸಲ್ಪಡುತ್ತಾನೆ.

# ೮೮. ಚತುರ್ಥಭಾವಗತ ಅಷ್ಟಮೇಶಫಲ

**ಪರಾಶರಹೋರಾ**

> ರಂಧ್ರೇಶೇ ಸುಖಭಾವಸ್ಥೇ ಮಾತೃಹೀನೋ ಭವೇಚ್ಛಿಶುಃ ।
> ಗೃಹಭೂಮಿಸುಖೈರ್ಹೀನೋ ಮಿತ್ರದ್ರೋಹೀ ನ ಸಂಶಯಃ ॥

ಅಷ್ಟಮೇಶನು ಚತುರ್ಥಭಾವದಲ್ಲಿ ಇದ್ದಾಗ ಶಿಶುವು ತಾಯಿಯನ್ನು ಕಳಕೊಂಡವನು, ಗೃಹ, ಭೂಮಿ ಮತ್ತು ಸುಖಹೀನನು ಹಾಗೂ ನಿಃಸಂಶಯವಾಗಿ ಮಿತ್ರದ್ರೋಹಿ ಆಗುತ್ತಾನೆ.

**ಮಾನಸಾಗರೀ**

> ನಿಧನೇಶೇ ತುರ್ಯಗತೇ ಪಿತೃಗತೇ ಪಿತೃತೋ ನಯೇಲ್ಲಕ್ಷ್ಮೀಮ್ ।
> ಪಿತೃಪುತ್ರಯೋಶ್ಚ ಯುದ್ಧಂ ಜನಕೋ ರೋಗಾನ್ವಿತೋ ಭವತಿ ॥

ಅಷ್ಟಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ತಂದೆಯ ಅವಸಾನದ ನಂತರ ಪಿತ್ರಾರ್ಜಿತ ಧನ ಲಭಿಸುತ್ತದೆ, ತಂದೆ-ಮಗನಲ್ಲಿ ಜಗಳ ಸಂಭವಿಸುತ್ತದೆ, ತಂದೆಯು ರೋಗಪೀಡಿತನು ಆಗುತ್ತಾನೆ.

**ಯವನಜಾತಕ**

> ಮೃತಿಪತೌ ಸುಖಭಾವಗತೇ ನರೋ ಜನಕಸಂಚಿತವೈಭವನಾಶಕೃತ್ ।
> ಗದಯುತಶ್ಚ ಸುತೇ ಜನಕೇಥವಾ ಕಲಹ ಏವಮಿಥಶ್ಚ ಸದೈವ ಹಿ ॥

ಅಷ್ಟಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆಯ ಸಂಚಿತ ಧನ-ಸಂಪತ್ತನ್ನು ನಾಶ ಮಾಡುತ್ತಾನೆ ಹಾಗೂ ರೋಗದಿಂದ ಕೂಡಿರುತ್ತಾನೆ, ಜಾತಕನು ತನ್ನ ತಂದೆ ಅಥವಾ ಮಗನೊಂದಿಗೆ ಯಾವಾಗಲೂ ಜಗಳ-ಕಲಹ ಮಾಡುತ್ತಾನೆ.

ಅನುಭವದಲ್ಲಿ - ಅಷ್ಟಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ಮಾತ್ರ ಸುಖದ ಅಭಾವ ಇರುತ್ತದೆ, ಗೃಹ, ಭೂಮಿ ಮತ್ತು ವಾಹನ ಪಡೆಯುತ್ತಾನೆ, ಆದರೆ ಸಾಲ ಮತ್ತು ಬಡ್ಡಿಯಿಂದ ಅಧಿಕ ಖರ್ಚು ಸಂಭವಿಸುತ್ತದೆ, ಪಿತ್ರಾರ್ಜಿತ

ಧನ-ಸಂಪತ್ತು ಲಭಿಸುತ್ತದೆ, ಅಷ್ಟಮೇಶನು ಪಾಪಗ್ರಹನಾದರೆ ಜಾತಕನಿಗೆ ವಾಹನದಿಂದ ನಷ್ಟ ಮನೆಯಲ್ಲಿ ಅಶಾಂತಿ ಮತ್ತೆ ಎದೆನೋವು ಇರುತ್ತದೆ.

## ೮೯. ಪಂಚಮಭಾವಗತ ಅಷ್ಟಮೇಶಫಲ

**ಪರಾಶರಹೋರಾ**

**ರಂಧ್ರೇಶೇ ಸುತಭಾವಸ್ಥೇ ಜಡಬುದ್ಧಿ: ಪ್ರಜಾಯತೇ ।**
**ಸ್ವಲ್ಪಪ್ರಜ್ಞೋ ಭವೇಜ್ಜಾತೋ ದೀರ್ಘಾಯುಶ್ಚ ಧನಾನ್ವಿತಃ ॥**

ಅಷ್ಟಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಜಡಬುದ್ಧಿಯವನು, ಅಲ್ಪಪುತ್ರರು ಉಳ್ಳವನು, ದೀರ್ಘಾಯುಷ್ಯ ಮತ್ತು ಧನವಂತನು ಆಗುತ್ತಾನೆ.

**ಮಾನಸಾಗರೀ**

**ಛಿದ್ರಪತೌ ತನಯಸ್ಥೇ ಕ್ರೂರೇ ಸುತವಿರಹಿತಃ ಶುಭೇ ತು ಶುಭಃ ।**
**ಜಾತೋಽಪಿ ನೈವ ಜೀವತಿ ಜೀವೇದಥ ಕಿತವಕರ್ಮರತಃ ॥**

ಅಷ್ಟಮೇಶನು ಕ್ರೂರಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನು ಸಂತಾನಹೀನನು ಆಗುತ್ತಾನೆ. ಅಷ್ಟಮೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಶುಭಫಲ ಲಭಿಸುತ್ತದೆ, ಸಂತಾನ ಆದರೂ ಕೂಡಾ ಜೀವಿಸುವುದಿಲ್ಲ.

**ಯವನಜಾತಕ**

**ಮರಣಭಾವಪತಿಸ್ತನಯೇ ಸ್ಥಿತಸ್ತನಯನಾಶಕರಶ್ಚ ಸದೈವ ಹಿ ।**
**ಯದಿಖಿಲೈರಶುಭಂ ಸ ಚ ಧೂರ್ತರಾಟ್ ಶುಭಖಗೈಶ್ಚ ಶುಭಂ ಸುತವೃದ್ಧಿಭಾಕ್ ॥**

ಅಷ್ಟಮೇಶನು ಕ್ರೂರಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಪುತ್ರನಾಶಯೋಗ ಆಗುತ್ತದೆ ಮತ್ತು ಅಶುಭಫಲ ಸಂಭವಿಸುತ್ತದೆ ಹಾಗೂ ಜಾತಕನು ಧೂರ್ತನು ಆಗುತ್ತಾನೆ. ಪಂಚಮಭಾವದಲ್ಲಿ ಶುಭಗ್ರಹರಿದ್ದರೆ ಪುತ್ರನ ಅಭಿವೃದ್ಧಿ ಆಗುತ್ತದೆ.

ಅನುಭವದಲ್ಲಿ - ಅಷ್ಟಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಶೀಘ್ರ ಆಲೋಚನೆ ಬರುತ್ತದೆ, ಕೂಡಲೇ ಅದನ್ನು ಕಾರ್ಯಗತಗೊಳಿಸಿದರೆ

ಚಿಂತಿತಫಲ ಪ್ರಾಪ್ತಿ ತೃಪ್ತಿಕರವಲ್ಲ, ಆದ್ದರಿಂದ ಎರಡನೇ ಸರ್ತಿ ಆಲೋಚಿಸಿದಾಗ ಕಾರ್ಯ ನಿರ್ವಹಣೆಯ ಉತ್ತಮ ವಿಧಾನ ಕಂಡುಬಂದು ಅದರಂತೆ ನಿರ್ವಹಿಸಿದರೆ ಸುಲಭದಲ್ಲಿ ಕಾರ್ಯ ಸಾಧನೆ ಮಾಡಬಹುದು, ಪಂಚಮಸ್ಥಿತ ಈ ಅಷ್ಟಮೇಶನು ಸಂತಾನದೋಷ ನೀಡುತ್ತಾನೆ, ಸೂಕ್ತ ಪರಿಹಾರ ಮಾಡಿದರೆ ಉತ್ತಮಸಂತಾನ ಪಡೆಯುತ್ತಾನೆ.

## ೯೦. ಷಷ್ಠಭಾವಗತ ಅಷ್ಟಮೇಷಫಲ

**ಪರಾಶರಹೋರಾ**

> **ರಂಧ್ರೇಶೇ ರಿಪುಭಾವಸ್ಥೇ ಶತ್ರುಜೇತಾ ಭವೇಜ್ಜನಃ ।**
> **ರೋಗಯುಕ್ತ ಶರೀರಶ್ಚ ಬಾಲ್ಯೇ ಸರ್ಪಜಲಾದ್ ಭಯಮ್ ॥**

ಅಷ್ಟಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ತನ್ನ ಶತ್ರುಗಳನ್ನು ಜಯಿಸುತ್ತಾನೆ, ಬಾಲ್ಯಕಾಲದಲ್ಲಿ ಸರ್ಪ ಮತ್ತು ನೀರಿನಿಂದ ಭಯ ಮತ್ತು ಅಪಾಯ ಇರುತ್ತದೆ.

**ಮಾನಸಾಗರೀ**

> **ಛಿದ್ರೇಶೇ ರಿಪುಸಂಗತೇ ದಿನಕರೇ ಭೂಭೃದ್ವಿರೋಧೀ ಗುರೌ ತ್ವಂಗೇ**
> **ಸೀದತಿ ದೃಷ್ಟಿರೋಗಕಲಿತಃ ಶುಕ್ರೇ ಸ ರೋಗೀ ವಿಧೌ ।**
> **ಭೌಮೇ ಕೋಪಯುತೋ ಬುಧೇ ಹಿ ಭಯಭೃತ್ತು ನ್ಯಾರ್ತಿಭೂತಃ ಶನೌ**
> **ಕಷ್ಟಂ ವೈ ವಿದಧಾತಿ ತತ್ರ ಶಶಿಭೃತ್ಸೌಮ್ಯೇಕ್ಷಿತೇನೈವ ಕಿಮ್ ॥**

1. ಅಷ್ಟಮೇಶನು ಸೂರ್ಯನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ರಾಜನ ವಿರೋಧಿ ಆಗುತ್ತಾನೆ. (ಈ ಯೋಗವು ಮಕರ ಲಗ್ನದವರಿಗೆ ಅನ್ವಯಿಸುತ್ತದೆ.)

2. ಅಷ್ಟಮೇಶನು ಗುರುವಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಅಂಗಾಂಗಗಳಲ್ಲಿ ವೇದನೆ ಇರುತ್ತದೆ. (ಈ ಯೋಗವು ವೃಷಭ ಮತ್ತು ಸಿಂಹ ಲಗ್ನದವರಿಗೆ ಅನ್ವಯಿಸುತ್ತದೆ.)

3. ಅಷ್ಟಮೇಶನು ಶುಕ್ರನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಕಣ್ಣಿನರೋಗ ಆಗುತ್ತದೆ. (ಈ ಯೋಗವು ತುಲಾ ಮತ್ತು ಮೀನಲಗ್ನದವರಿಗೆ ಅನ್ವಯಿಸುತ್ತದೆ.)

4. ಅಷ್ಟಮೇಶನು ಚಂದ್ರನಾಗಿ ಷಷ್ಠಭಾವದಲ್ಲಿ (ವೃಷಭರಾಶಿ) ಇದ್ದಾಗ ಜಾತಕನಿಗೆ ರೋಗ ಆಗುತ್ತದೆ. (ಈ ಯೋಗವು ಧನುರ್ಲಗ್ನದವರಿಗೆ ಅನ್ವಯಿಸುತ್ತದೆ.)

5. ಅಷ್ಟಮೇಶನು ಕುಜನಾಗಿ ಷಷ್ಠಭಾವದಲ್ಲಿ ಇದ್ದರೆ ಜಾತಕನು ಕೋಪಿಷ್ಠನು ಆಗುತ್ತಾನೆ. (ಈ ಯೋಗವು ಮೇಷ ಮತ್ತು ಕನ್ಯಾಲಗ್ನದವರಿಗೆ ಅನ್ವಯಿಸುತ್ತದೆ.)

6. ಅಷ್ಟಮೇಶನು ಬುಧನಾಗಿ ಷಷ್ಠಭಾವದಲ್ಲಿ ಇದ್ದರೆ ಜಾತಕನು ಭಯ-ಭೀತಿ ಉಳ್ಳವನು, (ಈ ಯೋಗವು ವೃಶ್ಚಿಕ ಮತ್ತು ಕುಂಭಲಗ್ನದವರಿಗೆ ಅನ್ವಯಿಸುತ್ತದೆ.)

7. ಅಷ್ಟಮೇಶನು ಶನಿಯಾಗಿ ಷಷ್ಠಭಾವದಲ್ಲಿ ಇದ್ದರೆ ಜಾತಕನಿಗೆ ಮುಖರೋಗ ಉಂಟಾಗುತ್ತದೆ. (ಈ ಯೋಗವು ಮಿಥುನ ಮತ್ತು ಕರ್ಕಟಕ ಲಗ್ನದವರಿಗೆ ಅನ್ವಯಿಸುತ್ತದೆ.

8. ಅಷ್ಟಮೇಶನು ಚಂದ್ರನಾಗಿ ಷಷ್ಠಭಾವದಲ್ಲಿ ಇದ್ದು ಬುಧನಿಂದ ನೋಡಲ್ಪಟ್ಟರೆ ಜಾತಕನಿಗೆ ವಿವಿಧ ರೀತಿಯ ಕಷ್ಟಗಳು ಸಂಭವಿಸುತ್ತದೆ.

**ಯವನಜಾತಕ**

**ಮೃತಿಪತೀ ರಿಪುಭಾವಗತೋ ಯದಾ ರವಿವಹೀತನ ಯೌ ಚ ವಿರೋಧಕೃತ್ ।**
**ವಿಧುಯುತಶ್ಚ ವಿರೋಧಕರೋ ಬುಧೇ ಭೃಗುಶನೀ ಬಹುರೋಗಕರಾವುಭೌ ॥**

1. ಸೂರ್ಯ ಅಥವಾ ಕುಜನು ಅಷ್ಟಮೇಶನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ವಿರೋಧ ಮಾಡುತ್ತಾನೆ, 2. ಅಥವಾ ಚಂದ್ರಯುತ ಬುಧನು ಕೂಡಾ ವಿರೋಧ ಮಾಡುತ್ತಾನೆ, 3. ಷಷ್ಠದಲ್ಲಿ ಶುಕ್ರ ಮತ್ತು ಶನಿ ಇದ್ದರೆ ಜಾತಕನಿಗೆ ತುಂಬಾ ರೋಗ ನೀಡುತ್ತದೆ.

ಅನುಭವದಲ್ಲಿ - ಅಷ್ಟಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ತನ್ನ ದಾರಿಯಲ್ಲಿ ಎದುರು ಬಂದವರ ನಾಶಕ್ಕೆ ಪ್ರಯತ್ನಿಸುತ್ತಾನೆ, ವಂಚನೆಯಿಂದ ಧನ-ಲಾಭ ಗಳಿಸುತ್ತಾನೆ, ಇವರು ಪತ್ತೆದಾರಿ, ಲೆಬೊರೇಟರಿ, ಸಂಶೋಧನಾ ಕೇಂದ್ರದಲ್ಲಿ, ಗುಪ್ತಚಾರ ದಳ ಇವುಗಳಲ್ಲಿ ಇದ್ದು ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸಿ ಅಭಿವೃದ್ಧಿ ಹೊಂದುತ್ತಾರೆ.

# ೯೧. ಸಪ್ತಮಭಾವಗತ ಅಷ್ಟಮೇಶಫಲ

**ಪರಾಶರಹೋರಾ**

> ರಂಧ್ರೇಶೇ ದಾರಭಾವಸ್ಥೇ ತಸ್ಯ ಭಾರ್ಯಾದ್ವಯಂ ಭವೇತ್ ।
> ವ್ಯಾಪಾರೇ ಚ ಭವೇದ್ ಹಾನಿಸ್ತಸ್ಮಿನ್ ಪಾಪಯುತೇ ಧ್ರುವಮ್ ॥

ಅಷ್ಟಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ದ್ವಿಭಾರ್ಯಾಯೋಗ ಇರುತ್ತದೆ, ಅಷ್ಟಮೇಶನು ಕ್ರೂರಗ್ರಹನಯುತಿಯಲ್ಲಿ ಇದ್ದರೆ ಜಾತಕನಿಗೆ ವ್ಯಾಪಾರದಲ್ಲಿ ಹಾನಿಯಾಗುತ್ತದೆ.

**ಮಾನಸಾಗರೀ**

> ಮೃತ್ಯುಪತೌ ಸಪ್ತಮಗೇ ದುರುದರರುಕ್ ಶೀಲವಲ್ಲಭೋ ದುಷ್ಟಃ ।
> ಕ್ರೂರೇ ಭಾರ್ಯಾದ್ವೇಷೀ ಕಲತ್ರದೋಷಾನ್ಮೃತಿಂ ಲಭತೇ ॥

ಅಷ್ಟಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಕೆಟ್ಟ ಉದರರೋಗದಿಂದ ಪೀಡಿತನು, ಸದ್ಗುಣವಂತಳಾದ ಸ್ತ್ರೀಯುಪತಿಯು ಮತ್ತು ದುಷ್ಟನು ಆಗುತ್ತಾನೆ, ಅಷ್ಟಮೇಶನು ಕ್ರೂರಗ್ರಹನಾದರೆ ಜಾತಕನು ತನ್ನ ಪತ್ನಿಯನ್ನು ದ್ವೇಷಿಸುತ್ತಾನೆ ಮತ್ತು ಪತ್ನಿಯ ದೋಷದಿಂದ ಮರಣ ಆಗುತ್ತದೆ.

**ಯವನಜಾತಕ**

> ಮದನಗೇಽಷ್ಟಮಪೇಽಪಿ ಚ ಗುಹ್ಯರುಕ್ ಕೃಪಣದುಷ್ಟ ಕುಶೀಲಜನಪ್ರಿಯಃ।
> ಖಲಖಗೈರ್ಬಹು ಪಾಪ ವಿರೋಧಕತ್ತಮದಯಾ ಕ್ಷಿತಿಜೇನ ಚ ಶಾಂಮ್ಯತಿ ॥

ಅಷ್ಟಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಗುಹ್ಯಸ್ಥಾನದಲ್ಲಿ ರೋಗ ಇರುತ್ತದೆ, ಕೃಪಣನು, ದುಷ್ಟನು, ಕುಶೀಲ ಜನರಿಗೆ ಪ್ರಿಯನು ಆಗುತ್ತಾನೆ, ಅಷ್ಟಮೇಶನು ಕ್ರೂರಗ್ರಹರೊಂದಿಗೆ ಇದ್ದಾಗ ಜಾತಕನು ಪಾಪಕರ್ಮ ಮತ್ತು ವಿರೋಧ ಮಾಡುತ್ತಾನೆ. ಕುಜನು ಅಷ್ಟಮೇಶನೊಂದಿಗೆ ಇದ್ದಾಗ ಉತ್ತಮ ಸ್ತ್ರೀಯಿಂದ ಶಾಂತಿ ಲಭಿಸುತ್ತದೆ.

ಅನುಭವದಲ್ಲಿ - ಅಷ್ಟಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ವಿವಾಹ ನಿಷ್ಕರ್ಷೆಯಾಗಿ ಕೈ ಬಿಟ್ಟು ಹೋಗುತ್ತದೆ, ಅಷ್ಟಮೇಶನು ಕ್ರೂರಗ್ರಹನಾದರೆ

ಪತ್ನಿಯು ಅನಾರೋಗ್ಯದಿಂದ ಪೀಡಿಸಲ್ಪಡುತ್ತಾಳೆ. ದಾಂಪತ್ಯ ಕಲಹದಿಂದ ವಿವಾಹ ವಿಚ್ಛೇದನ ಸಂಭವಿಸುತ್ತದೆ, ಪಾಲು ವ್ಯಾಪಾರದಲ್ಲಿ ಪಾಲುಗಾರರಿಂದ ನಷ್ಟಕ್ಕೀಡಾಗುತ್ತಾನೆ, ಜಾತಕನು ಮೂಲವ್ಯಾಧಿ ಅಥವಾ ಫಿಸ್ತೂಲಾ ರೋಗದಿಂದ ಪೀಡಿಸಲ್ಪಡುತ್ತಾನೆ.

## ೯೨. ಅಷ್ಟಮಭಾವಗತ ಅಷ್ಟಮೇಶಫಲ

**ಪರಾಶರಹೋರಾ**

> ರಂಧ್ರೇಶೇ ಮೃತ್ಯುಭಾವಸ್ಥೇ ಜಾತಾ ದೀರ್ಘಾಯುಷಾ ಯುತಃ ।
> ನಿರ್ಬಲೇ ಮಧ್ಯಮಾಯುಃ ಸ್ಯಾಚ್ಚೌರೋ ನಿಂದ್ಯೋಽನ್ಯ ನಿಂದಕಃ ॥

ಅಷ್ಟಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುಷ್ಯ ಯೋಗಉಳ್ಳವನು, ಅಷ್ಟಮಾಧಿಪತಿಯು ಬಲಹೀನನಾದರೆ ಜಾತಕನು ಮಧ್ಯಮ ಆಯುಷ್ಯಯೋಗ ಉಳ್ಳವನು, ಕಳ್ಳನು ಮತ್ತು ಅನ್ಯರನ್ನು ನಿಂದಿಸುವವನು ಹಾಗೂ ನಿಂದನೀಯನು ಆಗಿರುತ್ತಾನೆ.

**ಮಾನಸಾಗರೀ**

> ನಿಧನಪತೌ ನಿಧನಗತೇ ವ್ಯವಸಾಯೀ ವ್ಯಾಧಿವರ್ಜಿತೋ ನೀರುಕ್ ।
> ಕಿತವಕಲಾಕಲಿತವಪುಃ ಕಿತವಕುಲೇ ಜಾಯತೇ ವಿದಿತಃ ॥

ಅಷ್ಟಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಉದ್ಯೋಗ ಶೀಲನು, ರೋಗರಹಿತನು, ನಿರೋಗಿಯು, ಧೂರ್ತತೆಯಲ್ಲಿ ನಿಪುಣನು ಮತ್ತು ವಿಖ್ಯಾತನು ಆಗುತ್ತಾನೆ.

**ಯವನಜಾತಕ**

> ಮೃತಿಪತೌ ಮೃತಿಗೇ ವ್ಯವಸಾಯಕೃದ್ಗದಗಣೇನ ಯುತಃ ಶುಭವಾಕ್ಶುಚಿಃ ।
> ಕಿತವಕರ್ಮಕರಃ ಕಪಟೀ ನರಃ ಕಿತವಕರ್ಮಣಿ ನಾ ವಿದಿತಃ ಕುಲೇ ॥

ಅಷ್ಟಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಉದ್ಯೋಗ, ವ್ಯಾಪಾರ ಮಾಡುವವನು, ಮತ್ತು ರೋಗದಿಂದ ಪೀಡಿತನು, ಶುಭ ಮಾತುಗಳು, ಪವಿತ್ರನು, ವಂಚಕನು, ಕಪಟಿಯು ಮತ್ತು ತನ್ನ ಕುಲದಲ್ಲಿ ಧೂರ್ತತೆಯಿಂದ ಇರುತ್ತಾನೆ.

ಅನುಭವದಲ್ಲಿ - ಅಷ್ಟಮಭಾವವನ್ನು ಆಯುಷ್ಯಸ್ಥಾನ ಎಂದು ಕರೆಯುತ್ತಾರೆ, ಅಷ್ಟಮೇಶನು ಅಷ್ಟಮಭಾವದಲ್ಲಿ ಬಲಿಷ್ಠನು ಆಗಿರುತ್ತಾನೆ, ಹಾಗೂ ಜಾತಕನಿಗೆ ದೀರ್ಘಾಯುಯೋಗದಾಯಕನು ಆಗುತ್ತಾನೆ, ಅಷ್ಟಮೇಶನು ಬಲಹೀನನಾದ್ದಲ್ಲಿ ಜಾತಕನ ಆಯುಷ್ಯದ ಹಾನಿ ಸಂಭವಿಸುತ್ತದೆ. ಅಷ್ಟಮೇಶನು ದೂಷಿತನಾದರೆ ಜಾತಕನು ವಂಚಕನು, ನಿಂದನೀಯನು, ಹೀನಕಾರ್ಯ ಮಾಡುವವನು ಆಗುತ್ತಾನೆ.

## ೯೩. ನವಮಭಾವಗತ ಅಷ್ಟಮೇಶಫಲ

**ಪರಾಶರಹೋರಾ**

> ಅಷ್ಟಮೇಶೇ ತಪಃಸ್ಥಾನೇ ಧರ್ಮದ್ರೋಹೀ ಚ ನಾಸ್ತಿಕಃ ।
> ದುಷ್ಟಭಾರ್ಯಾಪತಿಶ್ಚೈವ ಪರದ್ರವ್ಯಾಪಹಾರಕಃ ॥

ಅಷ್ಟಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಧರ್ಮದ್ರೋಹಿಯು, ನಾಸ್ತಿಕನು, ದುಷ್ಟ ಸ್ತ್ರೀಯಪತಿಯು ಆಗುತ್ತಾನೆ ಮತ್ತು ಪರಧನವನ್ನು ಅಪಹರಿಸುತ್ತಾನೆ.

**ಮಾನಸಾಗರೀ**

> ಧರ್ಮಸ್ಥೇ ಮೃತಿನಾಥೇ ನಿಃಸಂಗೀ ಜೀವವಿಘಾತಕಃ ಪಾಪೀ ।
> ನಿರ್ಬಂಧುರ್ನಿಃಸ್ನೇಹಿ ಪೂಜ್ಯೋ ವಿಮುಖೇ ಮುಖೇ ವ್ಯಙ್ಗ: ॥

ಅಷ್ಟಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಮಿತ್ರರು ಅಥವಾ ಸಂಗಡಿಗರು ಇಲ್ಲದವನು, ಜೀವಹತ್ಯೆ ಮಾಡುವವನು, ಪಾಪಿಯು, ಬಂಧು ಮತ್ತು ಸ್ನೇಹಿತರು ಇಲ್ಲದವನು, ವಿಪಕ್ಷೀಯರಿಂದ ಸನ್ಮಾನಿತನು ಮತ್ತು ಮುಖವು ರೋಗಯುಕ್ತ ಆಗಿರುತ್ತದೆ.

**ಯವನಜಾತಕ**

> ಸುಕೃತಗೇಽಷ್ಟಮಭಾವಪತೌ ಜನೋ ಭವತಿ ಪಾಪರತಃ ಖಲು ಹಿಂಸಕಃ ।
> ಖಲು ಸುಹೃನ್ಮುಖಪೂಜ್ಯ ಇತಸ್ತತೋ ಭವತಿ ಮಿತ್ರಗಣೇನ ವಿವರ್ಜಿತ ಃ ॥

ಅಷ್ಟಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ನಿಶ್ಚಯವಾಗಿ ಪಾಪಕರ್ಮನಿರತನು, ಹಿಂಸೆಮಾಡುವವನು ಆಗುತ್ತಾನೆ, ಕೆಲವೊಮ್ಮೆ ಅಲ್ಲಿ-

ಇಲ್ಲಿ ಸನ್ಮಾನಿಸಲ್ಪಡುತ್ತಾನೆ, ಮತ್ತು ಮಿತ್ರರಿಂದ ಬಿಡಲ್ಪಡುತ್ತಾನೆ.

ಅನುಭವದಲ್ಲಿ - ದುಸ್ಥಾನಾಧಿಪತಿಯಾದ ಅಷ್ಟಮೇಶನು ಭಾಗ್ಯಭಾವದಲ್ಲಿ ಇದ್ದಾಗ ಜಾತಕನು ಧರ್ಮದ ವಿರುದ್ಧ ಆಚರಣೆ ಮಾಡುತ್ತಾನೆ, ಪರಧನವನ್ನು ವಂಚನೆಯಿಂದ ಗಳಿಸುತ್ತಾನೆ, ಅಷ್ಟಮಾಧಿಪತಿಯನ್ನು ನಷ್ಟಸ್ಥಾನಾಧಿಪತಿಯೆಂದು ಕರೆಯುತ್ತಾರೆ, ಇವನು ಭಾಗ್ಯಭಾವದಲ್ಲಿ ಇದ್ದಾಗ ಜಾತಕನ ಧನ-ಸಂಪತ್ತಿನ ಪರಿಳಿತಕ್ಕೆ ಕಾರಣ ಆಗುತ್ತಾನೆ, ಜಾತಕನು ಸಹೋದರರಿಗೆ ವಂಚನೆ ಮಾಡುತ್ತಾನೆ, ಈ ಅಷ್ಟಮೇಶನು ಜಾತಕನಿಗೆ ಭಾಗ್ಯದ ಪರಿಳಿತ ನೀಡುತ್ತಾನೆ.

## ೯೪. ದಶಮಭಾವಗತ ಅಷ್ಟಮೇಶಫಲ

**ಪರಾಶರಹೋರಾ**

> ರಂಧ್ರೇಶೇ ಕರ್ಮಭಾವಸ್ಥೇ ಪಿತೃಸೌಖ್ಯವಿವರ್ಜಿತಃ ।
> ಪಿಶುನಃ ಕರ್ಮಹೀನಶ್ಚ ಯದಿ ನೈವ ಶುಭೇಕ್ಷಿತೇ ॥

ಅಷ್ಟಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತಂದೆಯ ಸುಖವಿಲ್ಲದವನು, ಚಾಡಿಕೋರನು, ದುರ್ಜನನು, ಕರ್ಮಹೀನನು ಆಗುತ್ತಾನೆ, ಅಷ್ಟಮಭಾವವನ್ನು ಶುಭಗ್ರಹರು ನೋಡಿದರೆ ಅಶುಭಫಲನಾಶ ಆಗುತ್ತದೆ.

**ಮಾನಸಾಗರೀ**

> ಕರ್ಮಗತೇ ನಿಧನೇಶೇ ನೃಪಕರ್ಮಾ ನೀಚಕರ್ಮನಿರತಶ್ಚ ।
> ಅಲಸಃ ಕ್ರೂರೇ ಖಚರೇ ತನಯೋ ಮಾತಾ ನ ವಾ ಜೀವತಿ ॥

ಅಷ್ಟಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಕಾರ್ಯ ಹಾಗೂ ನೀಚಕರ್ಮದಲ್ಲಿ ಆಸಕ್ತನು ಆಗಿರುತ್ತಾನೆ. ಅಷ್ಟಮೇಶನು ಕ್ರೂರಗ್ರಹನಾದರೆ ಜಾತಕನು ಆಲಸಿಯು ಆಗುತ್ತಾನೆ. ಜಾತಕನ ತಾಯಿ ಅಥವಾ ಪುತ್ರನು ಜೀವಿಸುವುದಿಲ್ಲ.

**ಯವನ ಜಾತಕ**

> ಮೃತಿಪತೌ ದಶಮಸ್ಥಲಮಾಶ್ರಿತೇ ನೃಪತಿಕರ್ಮಕರೋಽಪಿಸಮಃ ಖಲೈಃ ।
> ಭವತಿಕರ್ಮಕರಶ್ಚ ನರಃ ಸದಾ ಪ್ರಿಯಜನೈ ರಹಿತಃ ಖಲು ದುಃಖಿತಃ ॥

ಅಷ್ಟಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ನ್ಯಾಯ-ನೀತಿಯಿಂದ ರಾಜಕಾರ್ಯ ಮಾಡುತ್ತಾನೆ, ಆದರೆ ದೂರ್ತನು. ಕೆಲಸದಲ್ಲಿ ನಿರತನು, ಯಾವಾಗಲೂ ಪ್ರಿಯಜನ ರಹಿತನು ಮತ್ತು ದುಃಖಿತನು ಆಗುತ್ತಾನೆ.

ಅನುಭವದಲ್ಲಿ - ಅಷ್ಟಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನಿಗೆ ಕರ್ಮಕ್ಷೇತ್ರದಲ್ಲಿ ಪರಿಶೀತ ಇರುತ್ತದೆ, ಜಾತಕನು ಅಗ್ಗಾಗ್ಗೆ ಉದ್ಯೋಗವನ್ನು ಬದಲಿಸುತ್ತಾನೆ, ಜಾತಕನ ತಂದೆಯ ಆರೋಗ್ಯ ಉತ್ತಮ ಇರುವುದಿಲ್ಲ, ಅಷ್ಟಮೇಶನು ಪಾಪಗ್ರಹನಾದರೆ ಜಾತಕನು ಪರಿಶ್ರಮದಿಂದ ದುಡಿದು ಅಭಿವೃದ್ಧಿ ಹೊಂದುತ್ತಾನೆ, ಆದರೆ ಕರ್ಮಕ್ಕೆ ತಕ್ಕ ಪ್ರತಿಫಲ ಲಭಿಸುವುದಿಲ್ಲ, ಸ್ಥಾನಮಾನ ಲಭಿಸುತ್ತದೆ, ಕೀರ್ತಿವಂತನು ಆಗುತ್ತಾನೆ, ಕರ್ಮಭಾವಸ್ಥಿತ ಅಷ್ಟಮಾಧಿಪತಿಯಿಂದ ಜಾತಕನಿಗೆ ಕರ್ಮಕ್ಷೇತ್ರದಲ್ಲಿ ತನ್ನ ಮೇಲಧಿಕಾರಿಯೊಂದಿಗೆ ವಿವಾದ ಸಂಭವಿಸಿ ಸ್ಥಾನನಷ್ಟ ಆಗುತ್ತದೆ, ಅನಂತರ ಸ್ವತಂತ್ರ ಉದ್ಯಮ ನಿರ್ವಹಿಸುತ್ತಾನೆ.

## ೯೫. ಏಕಾದಶಭಾವಗತ ಅಷ್ಟಮೇಷಫಲ

**ಪರಾಶರ ಹೋರಾ**

**ರಂಧ್ರೇಶೇ ಲಾಭಭಾವಸ್ಥೇ ಸಪಾಪೇ ಧನವರ್ಜಿತಃ ।**
**ಬಾಲ್ಯೇ ದುಃಖೀ ಸುಖೀ ಪಶ್ಚಾತ್ ದೀರ್ಘಾಯುಶ್ಚ ಶುಭಾನ್ವಿತೇ ॥**

ಅಷ್ಟಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನಇಲ್ಲದವನು, ಬಾಲ್ಯಪ್ರಾಯದಲ್ಲಿ ದುಃಖಿತನು, ಅನಂತರ ಸುಖಿವಂತನು ಆಗುತ್ತಾನೆ, ಅಷ್ಟಮಾಧಿಪತಿಯು ಶುಭಗ್ರಹನೊಂದಿಗೆ ಇದ್ದರೆ ದೀರ್ಘಾಯುಷ್ಯಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಲಾಭಸ್ಥೇ ಮೃತ್ಯುಪತೌ ಬಾಲ್ಯೇ ದುಃಖೀ ಸುಖೀ ಭವತಿ ಪಶ್ಚಾತ್ ।**
**ದೀರ್ಘಾಯುಃ ಸೌಮ್ಯಖಗೇ ಪಾಪೇಲ್ಪಾಯುರ್ನರೋ ಭವತಿ ॥**

ಅಷ್ಟಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಬಾಲ್ಯಕಾಲದಲ್ಲಿ ದುಃಖಿತನು, ಅನಂತರ ಸುಖಿವಂತನು ಆಗುತ್ತಾನೆ. ಅಷ್ಟಮೇಶನು ಶುಭಗ್ರಹನಾದರೆ ಜಾತಕನು ದೀರ್ಘಾಯುವು ಆಗುತ್ತಾನೆ, ಪಾಪಗ್ರಹನಾದರೆ ಅಲ್ಪಾಯುವು ಆಗುತ್ತಾನೆ.

ಯವನಜಾತಕ

ಭವಗತೋಽಷ್ಟಮಪಃ ಖಲು ಚಾಲ್ಪತೋ ಭವತಿ ಪುಷ್ಟಿಯುತಃ ಪರತಃ ಸುಖೀ ।
ಶುಭಖಗೈರ್ಬಹುಜೀವತಿ ಯುಙ್ಮಲೈರ್ಭವತಿ ನೀಚಜನೈಶ್ಚ ಸಮನ್ವಿತಃ ॥

ಅಷ್ಟಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ನಿಧಾನವಾಗಿ ಅಭಿವೃದ್ಧಿ ಹೊಂದಿ ಸುಖವಂತನು ಆಗುತ್ತಾನೆ, ಅಷ್ಟಮೇಶನು ಶುಭಗ್ರಹನಿಂದ ಯುತನಾದರೆ ಜಾತಕನು ದೀರ್ಘಾಯುವು ಆಗುತ್ತಾನೆ, ಅಷ್ಟಮೇಶನು ಪಾಪಗ್ರಹನಿಂದ ಯುತನಾದರೆ ಜಾತಕನು ನೀಚಜನರ ಸಹವಾಸ ಮಾಡುತ್ತಾನೆ.

ಅನುಭವದಲ್ಲಿ - ಅಷ್ಟಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನ ಲಾಭದ ಅಂಶವು ಗಿರಾಕಿಗಳಿಂದ, ಮತ್ತು ಸರಕಿನ ಬೆಲೆಯಲ್ಲಿ ಏರಿಳಿತದಿಂದ ನಷ್ಟ ಸಂಭವಿಸುತ್ತದೆ, ಆದರೂ ಜಾತಕನಿಗೆ ಉತ್ತಮಲಾಭ ಉಳಿಯುತ್ತದೆ, ಜಾತಕನು ನಿಧಾನವಾಗಿ ಅಭಿವೃದ್ಧಿ ಹೊಂದಿ ಸುಖ-ಸಂಪತ್ತನ್ನುಗಳಿಸುತ್ತಾನೆ, ಅಷ್ಟಮಾಧಿಪತಿಗೆ ಶುಭಗ್ರಹರ ದೃಷ್ಟಿ ಅಥವಾ ಯುತಿ ಇದ್ದರೆ ಜಾತಕನು ದೀರ್ಘಾಯುಷ್ಯ ಉಳ್ಳವನು, ಮತ್ತು ಸುಖ-ಸಂಪತ್ತಿನಿಂದ ಕೂಡಿದವನಾಗಿ ಕೀರ್ತಿವಂತನು ಆಗುತ್ತಾನೆ.

## ೯೬. ವ್ಯಯಭಾವಗತ ಅಷ್ಟಮೇಶಫಲ

ಪರಾಶರಹೋರಾ

ರಂಧ್ರೇಶೇ ವ್ಯಯಭಾವಸ್ಥೇ ಕುಕಾರ್ಯೇ ವ್ಯಯಕೃತ್ ಸದಾ ।
ಅಲ್ಪಾಯುಶ್ಚ ಭವೇಜ್ಜಾತಃ ಸಪಾಪೇ ಚ ವಿಶೇಷತಃ ॥

ಅಷ್ಟಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಕೆಟ್ಟಕೆಲಸಗಳಿಗೆ ಹಣ ಖರ್ಚುಮಾಡುತ್ತಾನೆ, ಜಾತಕನು ಅಲ್ಪಾಯುಷ್ಯಉಳ್ಳವನು, ವ್ಯಯಭಾವದಲ್ಲಿ ಇನ್ನೊಬ್ಬ ಪಾಪಗ್ರಹನಿದ್ದರೆ ವಿಶೇಷವಾಗಿ ಅಶುಭಫಲ ಸಂಭವಿಸುತ್ತದೆ.

ಮಾನಸಾಗರೀ

ವ್ಯಯಸಂಸ್ಥಿತೇಽಷ್ಟಮೇಶೇ ಕ್ರೂರವಾಕ್ತಸ್ಕರಃ ಶಠೋ ನಿರ್ಘೃಣಃ ।
ಆತ್ಮಗತಿರ್ವ್ಯಂಗವಪುರ್ಮೃತಸ್ತು ಕಾಕಾದಿಭಿರ್ಭಕ್ಷ್ಯಃ ॥

ಅಷ್ಟಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಕಠೋರವಾದ ಮಾತುಗಳನ್ನು ಆಡುವವನು, ಕಳ್ಳನು, ದುಷ್ಟನು, ನಿರ್ದಯನು, ಸ್ವೇಚ್ಛಾಚಾರದವನು ಹಾಗೂ ವಿಕೃತ ಅಂಗಾಂಗದವನು, ಮರಣದ ನಂತರ ಕಾಗೆ ಮೊದಲಾದ ಪಕ್ಷಿಗಳ ಆಹಾರ ಆಗುತ್ತಾನೆ.

**ಯವನಜಾತಕ**

> ವ್ಯಯಗತೇ ಮೃತಿಪೇ ಚ ಕಠೋರವಾಗ್ಭವತಿ ತಸ್ಕರಕರ್ಮಕರಃ ಶಠಃ ।
> ವಿಕಲಕರ್ಮಕರೋ ನಿಪುಣಃ ಖಲೋ ಮೃತಿಮಿತಶ್ಚ ಮೃಗಾಂಕ ಸುಭಕ್ಷಣಾತ್ ॥

ಅಷ್ಟಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನ ಮಾತಿನಲ್ಲಿ ಕಠೋರತೆ, ಕಳ್ಳತನ ಮಾಡುವ ಕೆಲಸದವನು, ಹಠವಾದಿ. ದೋಷಯುಕ್ತ ಕಾರ್ಯಮಾಡುವವನು, ನಿಪುಣನು. ದುಷ್ಟನು, ಆತ್ಮಹತ್ಯೆ ಮಾಡುವ ಇಚ್ಛೆ ಉಳ್ಳವನು ಮತ್ತು ಅಭಕ್ಷ ತಿನ್ನುವುದರಿಂದ ಸಾಯುತ್ತಾನೆ.

ಅನುಭವದಲ್ಲಿ - ಅಷ್ಟಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಅಧಿಕ ಖರ್ಚು ಹಾಗೂ ಅನಾವಶ್ಯಕ ಖರ್ಚು ಮಾಡುವುದರಿಂದ ಆರ್ಥಿಕ ಸಂಕಷ್ಟಗಳಿಗೀಡಾಗುತ್ತಾನೆ, ಮಾತಿನಲ್ಲಿ ತೀಕ್ಷ್ಣತೆ ಇರುತ್ತದೆ. ವ್ಯಯಭಾವಗತ ಅಷ್ಟಮೇಶನು ಪಾಪಗ್ರಹನಾದರೆ ಜಾತಕನು ಕಳ್ಳತನ, ವಂಚನೆ, ನಿರ್ದಯತೆ, ಮತ್ತು ಹಠತನ ಉಳ್ಳವನು ಮತ್ತು ಸಾಲಮಾಡಿ ನೂತನ ಮನೆಯನ್ನು ಕಟ್ಟಿಸುತ್ತಾನೆ. ಕುಡಿತ, ಕ್ರೂರತನ, ಮನಸ್ಸಿಗೆ ಬಂದಂತೆ ನಡೆಯುವುದು. ನಿದ್ರಾನಾಶ ಮತ್ತು ದುಷ್ಟಟಗಳಿಂದ ಆರೋಗ್ಯದ ಹಾನಿ ಸಂಭವಿಸುತ್ತದೆ, ಮಿತಿಮೀರಿದ ವೇಗದಿಂದ ವಾಹನ ಚಲಿಸಿ ಅಪಘಾತಕ್ಕೀಡಾಗುತ್ತಾರೆ.

## ಲಗ್ನಾದಿಭಾವಗತ ನವಮೇಶಫಲ

## ೯೭. ಲಗ್ನಭಾವಗತ ನವಮೇಶಫಲ

**ಪರಾಶರಹೋರಾ**

> ಭಾಗ್ಯೇಶೇ ಲಗ್ನಗೇ ಜಾತೋ ಭಾಗ್ಯವಾನ್ ಭೂಪವಂದಿತಃ ।
> ಸುಶೀಲಶ್ಚ ಸುರೂಪಶ್ಚ ವಿದ್ಯಾವಾನ್ ಜನಪೂಜಿತಃ ॥

ನವಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಭಾಗ್ಯವಂತನು,

ರಾಜಪೂಜಿತನು, ಸದ್ಗುಣವಂತನು, ಸುಂದರನು, ವಿದ್ಯಾವಂತನು ಮತ್ತು ಜನರಿಂದ ಪೂಜಿಸಲ್ಪಡುತ್ತಾನೆ.

**ಮಾನಸಾಗರೀ**

**ಲಗ್ನಗತೇ ನವಮೇಶೇ ದೇವಗುರೂಣಾಂ ಸುಸೇವಕಃ ಶೂರಃ ।**
**ಕೃಪಣಃ ಕ್ಷಿತಿಪತಿಕರ್ಮಾ ಸ್ವಲ್ಪಗ್ರಾಸೀ ಭವತಿ ಮತಿಮಾನ್ ॥**

ನವಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಉತ್ತಮರೀತಿಯಲ್ಲಿ ದೇವರ ಮತ್ತು ಗುರುವಿನ ಸೇವೆ ಮಾಡುತ್ತಾನೆ, ಶೂರನು, ಕೃಪಣನು, ರಾಜನಕಾರ್ಯ ಮಾಡುವವನು, ಅಲ್ಪ ಆಹಾರ ತಿನ್ನುವುದು ಹಾಗೂ ಬುದ್ಧಿವಂತನು ಆಗಿರುತ್ತಾನೆ.

**ಯವನಜಾತಕ**

**ತನುಗತೇ ನವಮಾಧಿಪತೌ ಗುರೌ ಸುರವಿನಾಯಕ ಪೂಜನತತ್ಪರಃ ।**
**ಸುಕೃತವಾನ್ಕೃಪಣೋ ನೃಪಕರ್ಮಕೃತ್ಸ್ಮೃತಿಯುತೋ ಮಿತಭುಕ್ಸ ನರಃ ಶುಚಿಃ ॥**

ನವಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಗುರು ಮತ್ತು ವಿನಾಯಕದೇವರ ಪೂಜೆಯಲ್ಲಿ ನಿರತನು, ಭಾಗ್ಯವಂತನು, ಕೃಪಣನು, ರಾಜಕಾರ್ಯ ಮಾಡುತ್ತಾನೆ, ನೆನಪು ಉಳ್ಳವನು, ಮಿತವಾದ ಊಟ ಮಾಡುವವನು ಮತ್ತು ಸಭ್ಯವ್ಯಕ್ತಿಯು, ಆಗಿರುತ್ತಾನೆ.

ಅನುಭವದಲ್ಲಿ - ನವಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಭಾಗ್ಯವಂತನು ಸಮಾಜದಲ್ಲಿ ಸನ್ಮಾನಿತನು ಆಕರ್ಷಕ ವ್ಯಕ್ತಿತ್ವ, ಉತ್ತಮ ಗುಣ ಉಳ್ಳವನು, ವಿದ್ಯಾವಂತನು, ದೇವ-ಬ್ರಾಹ್ಮಣರ ಸೇವೆ ಮಾಡುತ್ತಾನೆ, ಬುದ್ಧಿವಂತಿಕೆಯಿಂದ ಅಧಿಕ ಪರಿಶ್ರಮವಿಲ್ಲದೆ ತನಗೆ ಆವಶ್ಯಕತೆ ಉಳ್ಳ ವಸ್ತು-ಸಾಧನ ಇತ್ಯಾದಿ ಪಡೆಯುತ್ತಾನೆ, ಸ್ವಾರ್ಜಿತವಿತ್ತ ಉಳ್ಳವನು, ಸುಖವಂತನು ಮತ್ತು ಕೀರ್ತಿವಂತನು ಆಗುತ್ತಾನೆ.

## ೯೮. ದ್ವಿತೀಯಭಾವಗತ ನವಮೇಶಫಲ

**ಪರಾಶರಹೋರಾ**

**ಭಾಗ್ಯೇಶೇ ಧನಭಾವಸ್ಥೇ ಪಂಡಿತೋ ಜನವಲ್ಲಭಃ ।**
**ಜಾಯತೇ ಧನವಾನ್ ಕಾಮೀ ಸ್ತ್ರೀಪುತ್ರಾದಿಸುಖಾನ್ವಿತಃ ॥**

ನವಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಪಂಡಿತನು, ಜನರಿಗೆ ಪ್ರಿಯನಾದವನು ಮತ್ತು ಧನವಂತನು ಆಗುತ್ತನೆ, ಕಾಮಿಯು, ಪತ್ನಿ ಮತ್ತು ಪುತ್ರರೊಂದಿಗೆ ಸುಖದಿಂದ ಕೂಡಿದವನು ಆಗುತ್ತಾನೆ.

**ಮಾನಸಾಗರೀ**

**ನವಮೇಶೇ ಧನಯಾತೇ ವೃಷತೋ ವಿದಿತಃ ಸುಶೀಲವಾತ್ಸಲ್ಯಃ ।**
**ಸುಕೃತೀ ವದನವ್ಯಂಗಶ್ಚತುಷ್ಪದೋತ್ಪನ್ನಪೀಡಿತೌ ಮನುಜಃ ॥**

ನವಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಎತ್ತುಗಳ ಸಂಬಂಧದಿಂದ ವಿಖ್ಯಾತನು, ಸದ್ಗುಣವಂತನು, ಪ್ರೀತಿ ವಾತ್ಸಲ್ಯ ಉಳ್ಳವನು, ಉತ್ತಮಕಾರ್ಯಗಳಲ್ಲಿ ತಲ್ಲೀನನು, ಮುಖದಲ್ಲಿ ವಿಕಾರ ಇರುತ್ತದೆ, ಪಶುಗಳಿಂದ ಪೀಡಿತನು ಆಗುತ್ತಾನೆ.

**ಯವನಜಾತಕ**

**ನವಮಪೇ ಧನಭಾವಗತೇ ವ್ರತೀ ಸ ತು ಸುಶೀಲ ಸುತಶ್ಚ ನರಃ ಶುಚಿಃ ।**
**ಗತಿಯುತಶ್ಚ ಚತುಷ್ಪದ ಪೀಡಿತೋ ವ್ಯಯಯುತಃ ಶಮಸಾಧನತತ್ಪರಃ ॥**

ನವಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ವ್ರತ ಮಾಡುವವನು, ಸದ್ಗುಣವಂತರಾದ ಪುತ್ರರು ಉಳ್ಳವನು, ಸಭ್ಯ ವ್ಯಕ್ತಿಯು, ವೇಗವಂತನು, ಚತುಷ್ಪದದಿಂದ ಪೀಡಿತನು, ವ್ಯಯದಿಂದ ಕೂಡಿದವನು, ಮತ್ತು ಶಾಂತಿಸಾಧನ ತತ್ಪರನು ಆಗುತ್ತಾನೆ.

ಅನುಭವದಲ್ಲಿ - ನವಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಪಂಡಿತನು, ಸ್ವಾರ್ಜಿತವಿತ್ತ ಉಳ್ಳವನು, ಕುಟುಂಬದ ಏಳಿಗೆಗೆ ಸಹಾಯಕನು, ಹಾಗೂ ಕುಟುಂಬೀಯರಿಂದ ಪ್ರೀತಿಸಲ್ಪಡುತ್ತಾನೆ, ಭಾಗ್ಯಾಧಿಪತಿಯು ಶುಭಗ್ರಹ ನಾದರೆ ಜಾತಕನು ಅಧಿಕ ಪರಿಶ್ರಮವಿಲ್ಲದೆ ಧನ-ಸಂಪತ್ತನ್ನು ಗಳಿಸುತ್ತಾನೆ ಮತ್ತು ಕೀರ್ತಿವಂತನು ಆಗುತ್ತಾನೆ.

## ೯೯. ತೃತೀಯಭಾವಗತ ನವಮೇಶಫಲ

**ಪರಾಶರಹೋರಾ**

**ಭಾಗ್ಯೇಶೇ ಭ್ರಾತೃಭಾವಸ್ಥೇ ಜಾತೋ ಭ್ರಾತೃಸುಖಾನ್ವಿತಃ ।**
**ಧನವಾನ್ ಗುಣವಾಂಶ್ಚಾಪಿ ರೂಪಶೀಲಸಮನ್ವಿತಃ ॥**

ನವಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಭ್ರಾತೃಸುಖದಿಂದ ಕೂಡಿದವನು, ಧನವಂತನು, ಗುಣವಂತನು ಮತ್ತು ರೂಪವಂತನು ಆಗುತ್ತಾನೆ.

ಮಾನಸಾಗರೀ

**ಸಹಜಗತೇ ಸುಕೃತಪತೌ ರೂಪಸ್ತ್ರೀಬಂಧುವತ್ಸಲಃ ಪುರುಷಃ ।**
**ಬಂಧುಸ್ತ್ರೀರಕ್ಷಣಕೃದ್ ಯದಿ ಜೀವತಿ ಬಂಧುಭಿಃ ಸದಾ ಸಹಿತಃ ॥**

ನವಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸೌಂದರ್ಯ, ಸ್ತ್ರೀ ಹಾಗೂ ಬಂಧುಗಳಲ್ಲಿ ಪ್ರೇಮ ಉಳ್ಳ ಪುರುಷನು, ಬಂಧು-ಬಾಂಧವರ ಮತ್ತು ಪತ್ನಿಯ ರಕ್ಷಣೆ ಮಾಡುವವನು ಆಗುತ್ತಾನೆ, ಜಾತಕನು ಜೀವಿತನಾಗಿ ಇದ್ದರೆ ಯಾವಾಗಲೂ ಸಹೋದರರೊಂದಿಗೆ ಇರುತ್ತಾನೆ.

ಯವನಜಾತಕ

**ಸುಕೃತಪೇ ಸಹಜಸ್ಥಲಗೇ ತಥಾ ಭವತಿ ರೂಪಯುತೋ ಜನವಲ್ಲಭಃ ।**
**ಸ್ವಜನಬಂಧುಜನ ಪ್ರತಿಪಾಲಕೋ ವಿದಿತಕರ್ಮಕರೋ ಯದಿ ಜೀವಿತಃ ॥**

ನವಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ರೂಪವಂತನು, ಜನಪ್ರಿಯನು, ಸ್ವಜನರ ಮತ್ತು ಬಂಧುಗಳ ಪಾಲಕನು, ಜೀವಿತನಾಗಿದ್ದರೆ ವಿದಿತಕರ್ಮ ಮಾಡುವವನು ಆಗುತ್ತಾನೆ.

ಅನುಭವದಲ್ಲಿ - ನವಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಭ್ರಾತೃ ಸುಖ ಉಳ್ಳವನು, ಹಾಗೂ ಆತನ ಸಹೋದರರು ಜಾತಕನಿಂದ ಅಭಿವೃದ್ಧಿ ಹೊಂದುತ್ತಾರೆ, ಜಾತಕನು ಪ್ರಯತ್ನ ಮತ್ತು ಪರಿಶ್ರಮದಿಂದ ದುಡಿದು ಭಾಗ್ಯವಂತನು ಆಗುತ್ತಾನೆ, ಕುಟುಂಬೀಯರಿಗೆ ಸಹಾಯಕನು ಮತ್ತು ಸಮಾಜದ ಏಳಿಗೆಗೆ ದುಡಿಯುತ್ತಾನೆ.

## ೧೦೦. ಚತುರ್ಥಭಾವಗತ ನವಮೇಶಫಲ

ಪರಾಶರಹೋರಾ

**ಭಾಗ್ಯೇಶೇ ತುರ್ಯಭಾವಸ್ಥೇ ಗೃಹಯಾನಸುಖಾನ್ವಿತಃ ।**
**ಸರ್ವಸಂಪತ್ತಿಯುಕ್ತಶ್ಚ ಮಾತೃಭಕ್ತೋ ಭವೇನ್ನರಃ ॥**

ನವಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮನೆ, ವಾಹನ ಮತ್ತು ಸುಖದಿಂದ ಕೂಡಿದವನು ಹಾಗೂ ಸಕಲ ಸಂಪತ್ತಿನಿಂದ ಕೂಡಿದವನಾಗಿ ತಾಯಿಯಭಕ್ತನು ಆಗುತ್ತಾನೆ.

**ಮಾನಸಾಗರೀ**

**ಸುಕೃತೇಶೇ ಹಿಬುಕಸ್ಥೇ ಪಿತೃಭಕ್ತಃ ಪಿತೃಯಾತ್ರಾದಿಕೇऽಪಿ ಪಿತಃ ।**
**ವಿದಿತಃ ಸುಕೃತೀ ಪುರುಷಃ ಪಿತೃಕರ್ಮರತಮತಿರ್ಭವತಿ ॥**

ನವಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಂದೆಯ ಭಕ್ತನು ಆಗುತ್ತಾನೆ, ತಂದೆಯ ತೀರ್ಥಯಾತ್ರಾದಿಗೆ ವ್ಯವಸ್ಥೆ ಮಾಡುತ್ತಾನೆ, ಪ್ರಖ್ಯಾತನು, ಉತ್ತಮಕಾರ್ಯ, ಸತ್ಕರ್ಮ ಮಾಡುತ್ತಾನೆ, ತಂದೆಯ ಕಾರ್ಯದಲ್ಲಿ ಅಭಿರುಚಿ ಉಳ್ಳವನು ಆಗುತ್ತಾನೆ.

**ಯವನಜಾತಕ**

**ಹಿಬುಕ ಭಾವಗತೇ ಸುಕೃತೇಶ್ವರೇ ಬುಧಸುಹೃತ್ಪಿತೃ ಪೂಜನತತ್ಪರಃ ।**
**ಭವತಿ ತೀರ್ಥರತಃ ಸುರಭಕ್ತಿ ಮಾನ್ನಿಖಿಲ ಮಿತ್ರಪರಃ ಸ ಸಮೃದ್ಧಿ ಮಾನ್ ॥**

ನವಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ವಿದ್ವಾಂಸನು, ಮಿತ್ರರು ಮತ್ತು ತಂದೆಯನ್ನು ಗೌರವಿಸುವುದರಲ್ಲಿ ತತ್ಪರನು ತೀರ್ಥಗಳಲ್ಲಿ ರತನು, ದೇವತೆಗಳ ಭಕ್ತಿವಂತನು, ಎಲ್ಲಮಿತ್ರರ ಪರ ಉಳ್ಳವನು, ಮತ್ತು ಸಮೃದ್ಧಿವಂತನು ಆಗುತ್ತಾನೆ.

ಅನುಭವದಲ್ಲಿ - ನವಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮನೆ ಮತ್ತು ವಾಹನ ಪಡೆಯುತ್ತಾನೆ, ಮಾತೃ ಸುಖ ಉಳ್ಳವನು, ಧನ-ಸಂಪತ್ತು, ಸ್ವಾರ್ಜಿತವಿತ್ತ ಉಳ್ಳವನು, ಪಂಡಿತನು, ಸತ್ಕರ್ಮ ಸದ್ವಿನಿಯೋಗ ಮಾಡುತ್ತಾನೆ ಮತ್ತು ಪ್ರಖ್ಯಾತನು ಆಗುತ್ತಾನೆ.

## ೧೦೧. ಪಂಚಮಭಾವಗತ ನವಮೇಶಫಲ

**ಪರಾಶರಹೋರಾ**

**ಭಾಗ್ಯೇಶೇ ಸುತಭಾವಸ್ಥೇ ಸುತಭಾಗ್ಯ ಸಮನ್ವಿತಃ ।**
**ಗುರುಭಕ್ತಿರತೋ ಧೀರೋ ಧರ್ಮಾತ್ಮಾ ಪಂಡಿತೋ ನರಃ ॥**

ಪಂಚಮಭಾವದಲ್ಲಿ ಇದ್ದಾಗ ಜಾತಕನು ಪುತ್ರ ಭಾಗ್ಯದಿಂದ ಕೂಡಿದವನು, ಗುರುಭಕ್ತಿರತನು, ಧರ್ಮಾತ್ಮನು ಮತ್ತು ಪಂಡಿತನು ಆಗಿರುತ್ತಾನೆ.

ಮಾನಸಾಗರೀ

**ಸುಕೃತಗೃಹಪೇ ಸುತಸ್ಥೇ ಸುಕೃತೀ ದೇವಗುರುಪೂಜನೇ ನಿರತಃ ।**
**ವಪುಷಾ ಸುಂದರ ಮೂರ್ತಿಃ ಸುಕೃತಸಮೇತಾಃ ಸುತಾ ಬಹವಃ ॥**

ನವಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಸತ್ಕರ್ಮ ಮಾಡುವವನು, ದೇವತಾರಾಧನೆ ಮತ್ತು ಗುರುಪೂಜೆಯಲ್ಲಿ ನಿರತನು, ಸುಂದರ ಸ್ವರೂಪದ ದೇಹ ಮತ್ತು ಸದಾಚಾರ-ಸದ್ಗುಣವಂತರಾದ ಪುತ್ರರು ಉಳ್ಳವನು ಆಗುತ್ತಾನೆ.

ಯವನಜಾತಕ

**ಸುಕೃತಪೇ ತನಯಸ್ಥಲಗೇ ಯದಾ ಸುರಮಹೀಸುರಭಾವಯುತೋ ನರಃ ।**
**ಪ್ರಕೃತಿಸುಂದರತಾ ಮತಿಮಾನ್ನರೋ ಮಧುರವಾಕ್ತನಯಾಶ್ಚ ಭವಂತಿ ಹಿ ॥**

ನವಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ದೇವರಲ್ಲಿ ಮತ್ತು ಬ್ರಾಹ್ಮಣರಲ್ಲಿ ಪ್ರೀತಿ-ವಿಶ್ವಾಸ ಇಟ್ಟಿರುವವನು, ಸ್ವಭಾವ ಸಹಜವಾದ ಗುಣ, ಸೌಂದರ್ಯವಂತನು, ಬುದ್ಧಿವಂತನು, ಸಿಹಿಯಾದ ಮಾತುಗಳು ಮತ್ತು ಪುತ್ರರೊಂದಿಗೆ ಕೂಡಿರುವವನು ಆಗುತ್ತಾನೆ.

ಅನುಭವದಲ್ಲಿ – ನವಮೇಶನು ಪಂಚಮಭಾವಗತನಾದಾಗ ಜಾತಕನು ಸತ್ಕರ್ಮ-ಸದ್ವಿನಿಯೋಗ ಮಾಡುತ್ತಾನೆ, ಧಾರ್ಮಿಕತೆ, ಗುರು ಮತ್ತು ದೇವರಲ್ಲಿ ಭಕ್ತಿಉಳ್ಳವನು, ಪಂಡಿತನು, ಮಕ್ಕಳು ದೊಡ್ಡವರಾದಂತೆ ಅಭಿವೃದ್ಧಿ ಹೊಂದುತ್ತಾನೆ.

## ೧೦೨. ಷಷ್ಠಭಾವಗತ ನವಮೇಶಫಲ

ಪರಾಶರಹೋರಾ

**ಭಾಗ್ಯೇಶೇ ರಿಪು ಭಾವಸ್ಥೇ ಸ್ವಲ್ಪಭಾಗ್ಯೋ ಭವೇನ್ನರಃ ।**
**ಮಾತುಲಾದಿಸುಖೈರ್ಹೀನಃ ಶತ್ರುಭಿಃ ಪೀಡಿತಃ ಸದಾ ॥**

ನವಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಅಲ್ಪ ಭಾಗ್ಯದವನು

ಸೋದರ ಮಾವ ಮತ್ತು ಸೋದರ ಮಾವನ ಸಂಭಂಧಿಕರಿಂದ ಸುಖಿಹೀನನು ಮತ್ತು ಯಾವಾಗಲೂ ಶತ್ರುಗಳಿಂದ ಪೀಡಿತನು ಆಗುತ್ತಾನೆ.

**ಮಾನಸಾಗರೀ**

**ಶತ್ರುಪ್ರಣತಿಪರಾಯಣಧರ್ಮನಿಮಗ್ನಂ ಕಲಾವಿಕಲಕಾಯಮ್ ।**
**ದರ್ಶನನಿಂದಾನಿರತಂ ಸುಕೃತಪತಿಃ ಷಷ್ಠಗಃ ಕುರುತೇ ॥**

ನವಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳನ್ನು ಹೊಗಳುತ್ತಾನೆ (ಸ್ತುತಿ), ಧಾರ್ಮಿಕ ಕಾರ್ಯಕಲಾಪಗಳಲ್ಲಿ ನಿರತನು, ಕಲಾಕಾರನು, ವಿಕೃತ ದೇಹದವನು, ದೃಷ್ಟಿ ದೋಷ ಉಳ್ಳವನು ಮತ್ತು ನಿಂದೆ ಮಾಡುವವನು ಆಗುತ್ತಾನೆ.

**ಯವನಜಾತಕ**

**ನವಮಪೇ ರಿಪುಗೇ ರಿಪುಸಂಯುತಃ ಪ್ರಣಯಕೃದ್ವಿಕಲಃ ಕಥಿತಃ ಶುಚಿಃ ।**
**ವಿಕೃತ ದರ್ಶನಭಾಕ್ಚ ತಥಾ ಖಲೋ ಭವತಿ ನಿಂದಿತ ಕೀರ್ತಿಯುತೋ ನರಃ ॥**

ನವಮೇಶನು ಷಷ್ಠಭಾವದಲ್ಲಿ ಇದ್ದಾಗ. ಜಾತಕನು ಶತ್ರುಗಳಿಂದ ಕೂಡಿದವನು, ಪ್ರೀತಿ ಮಾಡುವವನು, ನ್ಯೂನತೆ ಉಳ್ಳವನು, ಸಭ್ಯವ್ಯಕ್ತಿಯೆಂದು ಹೇಳಲ್ಪಡುತ್ತಾನೆ, ಕಣ್ಣಿನರೋಗದಿಂದ ಪೀಡಿತನು ಅಥವಾ ನೋಡಲು ಜಗುಪ್ಸೆಯುಂಟು ಮಾಡುವವನು, ದುಷ್ಟನು ಮತ್ತು ನಿಂದಿತನು ಆಗುತ್ತಾನೆ.

ಅನುಭವದಲ್ಲಿ - ನವಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳಿಂದ, ಮತ್ತು ಸಾಲ ಪಡೆದವರಿಂದ ಪೀಡಿತನು, ದೃಷ್ಟಿ ದೋಷ ಇರುತ್ತದೆ, ಪರರನ್ನು ನಿಂದಿಸುವವನು, ನೂತನ ಉದ್ಯಮ ಪ್ರಾರಂಬಿಸಿ ಪರಿಶ್ರಮ ಮತ್ತು ಚತುರತೆಯಿಂದ ನಿರ್ವಹಿಸಿ ಅಭಿವೃದ್ಧಿ ಹೊಂದುತ್ತಾನೆ.

## ೧೦೩. ಸಪ್ತಮಭಾವಗತ ನವಮೇಶಫಲ

**ಪರಾಶರಹೋರಾ**

**ಭಾಗ್ಯೇಶೇ ದಾರಭಾವಸ್ಥೇ ದಾರಯೋಗಾತ್ ಸುಖೋದಯಃ ।**
**ಗುಣವಾನ್ ಕೀರ್ತಿಮಾಂಶ್ಚಾಪಿ ಜಾಯತೇ ದ್ವಿಜಸತ್ತಮಃ ॥**

ನವಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ವಿವಾಹದ ನಂತರ

ಸುಖಪ್ರಾಪ್ತಿ ಆಗುತ್ತದೆ ಮತ್ತು ಗುಣವಂತನು, ಕೀರ್ತಿವಂತನು ಆಗುತ್ತಾನೆ.

ಮಾನಸಾಗರೀ

> ನವಮಪತೌ ಸಪ್ತಮಗೇ ಸತ್ಯವತೀ ಸುವದನಾ ಸುರೂಪಾ ಚ ।
> ಶೀಲಶ್ರೀಯುತದಯಿತಾ ಸುಕೃತಯುತಾ ಜಾಯತೇನಿಯತಮ್ ॥

ನವಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಸತ್ಯವತೀ, ಸುಂದರಮುಖಿ, ಸುರದ್ರೂಪಿ, ಶೀಲವಂತಳು, ಕಾಂತಿಯುತಳು, ಸದಾ ಸತ್ಕರ್ಮನಿರತಳು ಆಗಿರುವ ಪತ್ನಿಯನ್ನು ಪಡೆಯುತ್ತಾನೆ.

ಯವನಜಾತಕ

> ನವಮಪ ಮದಗೇ ವನಿತಾಸುಖಂ ವಚನಕೃಚ್ಚತುರಾ ಧನಸಂಯುತಾ ।
> ಭವತಿ ರಾಗವತೀ ಕಿಲ ಸುಂದರೀ ಸುಕೃತಕರ್ಮರತಾ ಬಹುಶೀಲಿನೀ ॥

ನವಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಸ್ತ್ರೀಸುಖ ಹೊಂದುತ್ತಾನೆ ಮತ್ತು ಮಾತಿನಲ್ಲಿ ಚತುರತೆ ಉಳ್ಳವನು ಆಗಿರುತ್ತಾನೆ, ಆತನ ಪತ್ನಿಯು ಧನವಂತಳು, ಅನುರಾಗ ಉಳ್ಳವಳು, ಸೌಂದರ್ಯವಂತಳು, ಪುಣ್ಯಕಾರ್ಯದಲ್ಲಿ ನಿರತಳು ಮತ್ತು ಶೀಲವಂತಳು ಆಗಿರುತ್ತಾಳೆ.

ಅನುಭವದಲ್ಲಿ - ನವಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ವಿವಾಹದ ನಂತರ ಭಾಗ್ಯೋದಯ ಆಗುತ್ತದೆ, ಪತ್ನಿಯು ಸೌಂದರ್ಯವತಿಯು ಆಕರ್ಷಕ ವ್ಯಕ್ತಿತ್ವ ಸದ್ಗುಣವಂತಳು ಮತ್ತು ಸತ್ಕರ್ಮ-ಸದಾಚಾರವಂತಳು ಆಗಿರುತ್ತಾಳೆ, ವ್ಯಾಪಾರ-ವ್ಯವಹಾರದಲ್ಲಿ ಅಭಿವೃದ್ಧಿ ಹೊಂದುತ್ತಾನೆ, ಹಾಗೂ ನೂತನ ಉದ್ಯಮ ಕೈಗೊಳ್ಳುತಾನೆ, ಉದ್ಯೋಗ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿ ಉನ್ನತ ಪದವಿ ಪಡೆಯುತ್ತಾನೆ.

## ೧೦೪. ಅಷ್ಟಮಭಾವಗತ ನವಮೇಶಫಲ

ಪರಾಶರಹೋರಾ

> ಭಾಗ್ಯೇಶೇ ಮೃತ್ಯುಭಾವಸ್ಥೇ ಭಾಗ್ಯಹೀನೋ ನರೋ ಭವೇತ್ ।
> ಜ್ಯೇಷ್ಠಭ್ರಾತೃಸುಖಂ ನೈವ ತಸ್ಯ ಜಾತಸ್ಯ ಜಾಯತೇ ।

ನವಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಭಾಗ್ಯಹೀನನು ಆಗುತ್ತಾನೆ ಮತ್ತು ಹಿರಿಯ ಸಹೋದರನ ಸುಖ ಇರುವುದಿಲ್ಲ.

**ಮಾನಸಾಗರೀ**

**ದುಷ್ಟೋ ಜಂತುವಿಘಾತೀ ಗೃಹಬಂಧು ವಿವರ್ಜಿತಃ ಸುಕೃತರಹಿತಃ ।**
**ನಿಧನಗತೇ ನವಮೇಶೇ ಕ್ರೂರೇ ಷಣ್ಢಃ ಸ ವಿಜ್ಞೇಯಃ ॥**

ನವಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ದುಷ್ಟ ಜಂತುಗಳನ್ನು ನಾಶಮಾಡುವವನು, ಮನೆ ಮತ್ತು ಬಂಧು-ಬಾಂಧವರನ್ನು ಬಿಟ್ಟವನು ಮತ್ತು ಸತ್ಕರ್ಮ ಮಾಡದವನು ಆಗುತ್ತಾನೆ. ನವಮೇಶನು ಕ್ರೂರಗ್ರಹನಾದರೆ ಜಾತಕನು ನಪುಂಸಕನು ಆಗುತ್ತಾನೆ.

**ಯವನಜಾತಕ**

**ಭವತಿ ದುಷ್ಟತನುರ್ಜನವಂಚಕೋ ಮೃತಿಗತೇ ಸುಕೃತಾಧಿಪತೌ ಯದಾ ।**
**ಖಲಜನಃ ಸುಕೃತ್ಯೈ ರಹಿತಃ ಶಠೋ ವಿಟ್‌ಸಮಿಶ್ಚ ತಥೈವ ನಪುಂಸಕಃ ॥**

ನವಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ದೂಷಿತ ಶರೀರದವನು ಜನರನ್ನು ವಂಚಿಸುವವನು, ಹಾಗೂ ದುಷ್ಟನು ಆಗಿರುತ್ತಾನೆ, ಪುಣ್ಯಪುರುಷರ ಸಹಾವಾಸದಿಂದ ರಹಿತನು, ದೂರ್ತನು, ಕಾಮಿ ಜನರ ಸಹಾವಾಸ ಉಳ್ಳವನು ಮತ್ತು ನಪುಂಸಕನು ಆಗುತ್ತಾನೆ.

ಅನುಭವದಲ್ಲಿ - ಭಾಗ್ಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ಭಾಗ್ಯದ ವಿರೀತ ಸಂಭವಿಸುತ್ತದೆ, ಕೈಕೊಂಡ ಕಾರ್ಯಗಳಲ್ಲಿ ಆರ್ಥಿಕ ಒತ್ತಡದಿಂದ ಕೆಲವೊಮ್ಮೆ ಹಾನಿಯಾಗುತ್ತದೆ, ನೂತನ ಮನೆ ಕಟ್ಟಿಸುತ್ತಾನೆ, ದೇಶ-ವಿದೇಶ ಪ್ರಯಾಣ ಮತ್ತು ತೀರ್ಥಯಾತ್ರೆ ಮಾಡುತ್ತಾನೆ.

## ೧೦೫. ನವಮಭಾವಗತ ನವಮೇಶಫಲ

**ಪರಾಶರಹೋರಾ**

**ಭಾಗ್ಯೇಶೇ ಭಾಗ್ಯಭಾವಸ್ಥೇ ಬಹುಭಾಗ್ಯಸಮನ್ವಿತಃ ।**
**ಗುಣಸೌಂದರ್ಯಸಂಪನ್ನೋ ಸಹಜೇಭ್ಯಃ ಸುಖಂ ಬಹು ॥**

ನವಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಹೇರಳವಾದ ಭಾಗ್ಯದಿಂದ ಕೂಡಿದವನು ಆಗುತ್ತಾನೆ, ಗುಣವಂತನು, ಸೌಂದರ್ಯವಂತನು ಮತ್ತು ಸಹೋದರರಿಂದ ಸುಖ ಲಭಿಸುತ್ತದೆ.

**ಮಾನಸಾಗರೀ**

> **ಸುಕೃತಗತಃ ಸುಕೃತಪತಿಃ ಸ್ವಬಂಧುಭಿಃ ಪ್ರೀತಿಮತುಲಿತಸಮತ್ವಮ್ ।**
> **ದಾತಾರಂ ದೇವಗುರೌ ಸ್ವಜನ ಕಲತ್ರಾದಿ ಸಂಸಕ್ತಮ್ ॥**

ನವಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತನ್ನ ಸಹೋದರರೊಂದಿಗೆ ಮತ್ತು ಬಂಧು-ಬಾಂಧವರೊಂದಿಗೆ ಅತಿಪ್ರೀತಿ ಮತ್ತು ಸಮಾನಭಾವನೆ ಉಳ್ಳವನು, ದಾನಿಯು, ದೇವತಾರಾಧನೆ, ಗುರುವಿನಪೂಜನೆ, ಸ್ವಜನರ, ಪತ್ನಿ, ಪುತ್ರ ಮೊದಲಾದವರಲ್ಲಿ ಸಂಬಂಧ ಅಥವಾ ಕೂಡಿಕೊಂಡಿರುವವನು ಆಗುತ್ತಾನೆ.

**ಯವನಜಾತಕ**

> **ಸುಕೃತಭಾವಪತಿರ್ನವಮೇ ಸ್ಥಿತೌ ಭವತಿ ಬಂಧುಜನೈಃ ಸಹಿತಃ ಶುಚಿಃ ।**
> **ಅರುಚಿತಶ್ಚ ವಿವಾದಕರೇ ಜನೋ ಗುರುಸುಹೃತ್ಸ್ವಜನೇಷು ರತಃ ಸದಾ ॥**

ನವಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಬಂಧುಜನರೊಂದಿಗೆ ಕೂಡಿರುವವನು, ಸಭ್ಯವ್ಯಕ್ತಿಯು, ಅರುಚಿಯಿಂದ ವಿವಾದ ಮಾಡುವವನು, ಗುರು, ಮಿತ್ರರು ಮತ್ತು ಸ್ವಜನರನ್ನು ಯಾವಾಗಲೂ ಪ್ರೀತಿಸುವವನು ಆಗುತ್ತಾನೆ.

ಅನುಭವದಲ್ಲಿ - ಭಾಗ್ಯಾಧಿಪತಿಯು ಭಾಗ್ಯದಲ್ಲಿ ಇದ್ದಾಗ ಜಾತಕನು ಗುರು-ದೇವರ ಅನುಗ್ರಹದಿಂದ ಭಾಗ್ಯವಂತನು, ಸುಖಿವಂತನು ಆಗುತ್ತಾನೆ, ದೇವತಾರಾಧನೆ ಮತ್ತು ಗುರುಹಿರಿಯರಸೇವೆ ಮಾಡುತ್ತಾನೆ. ಜಾತಕನಿಗೆ ಅವಶ್ಯಕತೆ ಉಳ್ಳವಸ್ತು ಅವನು ಹೇಳದೆ ಕೇಳದೆ ಅಕಸ್ಮಾತ್ ಯಾರಾದರೂ ಅವನಿಗೆ ತಂದುಕೊಡುತ್ತಾರೆ, ಸಮಾಜದಲ್ಲಿ ಸ್ಥಾನ-ಮಾನ, ಉದ್ಯೋಗ ಕ್ಷೇತ್ರದಲ್ಲಿ ಯಶಸ್ಸು, ಕೀರ್ತಿ, ಅಭಿವೃದ್ಧಿ ಮತ್ತು ಧನಲಾಭ ಲಭಿಸುತ್ತದೆ, ದೇವಸ್ಥಾನದ, ಸಮಾಜದ, ಸಂಘ-ಸಂಸ್ಥೆಗಳ ಆಡಳಿತಾಧಿಕಾರಿ ಆಗುತ್ತಾನೆ.

## ೧೦೬. ದಶಮಭಾವಗತ ನವಮೇಶಫಲ

**ಪರಾಶರಹೋರಾ**

> ಭಾಗ್ಯೇಶೇ ಕರ್ಮಭಾವಸ್ಥೇ ಜಾತೋ ರಾಜಾಽಥ ತತ್ಸಮಃ ।
> ಮಂತ್ರೀ ಸೇನಾಪತಿರ್ವಾಽಪಿ ಗುಣವಾನ್ ಜನಪೂಜಿತಃ ॥

ನವಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನು ಅಥವಾ ರಾಜತುಲ್ಯನು ಆಗುತ್ತಾನೆ. ಮಂತ್ರಿ ಅಥವಾ ಸೇನಾಪತಿ ಆಗುತ್ತಾನೆ, ಗುಣವಂತನು ಮತ್ತು ಜನರಿಂದ ಪೂಜಿತನು ಆಗುತ್ತಾನೆ.

**ಮಾನಸಾಗರೀ**

> ನೃಪಕರ್ಮಾಣಂ ಶೂರಂ ಮಾತಾಪಿತ್ರೋಶ್ಚ ಪೂಜಕಂ ಪುರುಷಮ್ ।
> ಧರ್ಮಖ್ಯಾತಂ ಕುರುತೇ ಸುಕೃತಪತಿರ್ಗಗನಗ್ರಹಶೀಲಃ ॥

ನವಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಸೇವೆಯಲ್ಲಿರುವವನು, ಶೂರನು, ತಂದೆ-ತಾಯಿಯ ಆರಾಧಕನು, ಧಾರ್ಮಿಕ ಆಚರಣೆಯಿಂದ ಪ್ರಖ್ಯಾತನು ಆಗುತ್ತಾನೆ.

**ಯವನಜಾತಕ**

> ನೃಪತಿಕರ್ಮಕರೋ ನೃಪವಿತ್ತಯುಕ್ಸುಕೃತಕರ್ಮಕರೋ ಜನನೀಪರಃ ।
> ವಿದಿತಕರ್ಮಕರಃ ಸುಕೃತಾಧಿಪೋ ಗಗನಗೇ ಪುರುಷೋ ಭವತಿ ಧ್ರುವಮ್ ॥

ನವಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಸೇವೆ ಮಾಡುತ್ತಾನೆ. ರಾಜನಿಂದ ಲಭಿಸಿದ ಧನದಿಂದ ಪುಣ್ಯಕಾರ್ಯ ಮಾಡುತ್ತಾನೆ. ತಾಯಿಯ ಸೇವೆಯಲ್ಲಿ ನಿರತನು, ಮತ್ತು ವಿಖ್ಯಾತ ಕಾರ್ಯ ಮಾಡುವವನು ಆಗುತ್ತಾನೆ.

ಅನುಭವದಲ್ಲಿ - ಭಾಗ್ಯೇಶನು ದಶಮಭಾವಗತನಾದಾಗ ಜಾತಕನಿಗೆ ರಾಜಯೋಗಕಾರಕನು ಆಗುತ್ತಾನೆ, ನವಮಭಾವವನ್ನು ಲಕ್ಷ್ಮೀಸ್ಥಾನ ಮತ್ತು

ದಶಮಸ್ಥಾನವನ್ನು ವಿಷ್ಣುಸ್ಥಾನ ಎಂದು ಕರೆಯುತ್ತಾರೆ, ಭಾಗ್ಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನಿಗೆ ಸ್ಥಾನ-ಮಾನ ಉನ್ನತ ಪದವಿ, ಧನ-ಸಂಪತ್ತು ಲಭಿಸುತ್ತದೆ, ಸಮಾಜದಲ್ಲಿ ಗಣ್ಯ ವ್ಯಕ್ತಿಯಾಗಿ ಸನ್ಮಾನಿತನಾಗುತ್ತಾನೆ, ರಾಜಕೀಯದಲ್ಲಿ ಚತುರತೆಯಿಂದ ಕಾರ್ಯಸಾಧನೆ ಮಾಡಿ ಜನಹಿತ ಸಾಧಿಸುತ್ತಾನೆ, ಧಾರ್ಮಿಕ ಸಂಸ್ಥೆಗಳಿಗೆ ಸಹಾಯಕನು ಆಗುತ್ತಾನೆ, ಹೆತ್ತವರ ಸೇವೆ ಮಾಡುತ್ತಾನೆ ಹಾಗೂ ಅವರ ಮಾತಿನಂತೆ ನಡೆಯುತ್ತಾನೆ.

## ೧೦೭. ಏಕಾದಶಭಾವಗತ ನವಮೇಶಫಲ

**ಪರಾಶರಹೋರಾ**

> **ಭಾಗ್ಯೇಶೇ ಲಾಭಭಾವಸ್ಥೇ ಧನಲಾಭೋ ದಿನೇ ದಿನೇ ।**
> **ಭವತೋ ಗುರುಜನಾನಾಂ ಚ ಗುಣವಾನ್ ಪುಣ್ಯವಾನಪಿ ॥**

ನವಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನಿಗೆ ಧನಲಾಭ ದಿನೇ ದಿನೇ ಆಗುತ್ತದೆ, ಗುರುಜನರ ಭಕ್ತನು, ಗುಣವಂತನು ಮತ್ತು ಪುಣ್ಯವಂತನೂ ಕೂಡಾ ಆಗಿರುತ್ತಾನೆ.

**ಮಾನಸಾಗರೀ**

> **ದೀರ್ಘಾಯುರ್ಧರ್ಮಪರೋ ಧನೇಶ್ವರಃ ಸ್ನೇಹಲೋ ನೃಪತಿಲಾಭೀ ।**
> **ಸುಕೃತಖ್ಯಾತಃ ಸುಕೃತವಿಭೌ ಲಾಭಭವನಸ್ಥೇ ॥**

ನವಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುವು, ಧರ್ಮಪರಾಯಣನು, ಶ್ರೀಮಂತನು, ಪ್ರೀತಿ-ವಾತ್ಸಲ್ಯ ಉಳ್ಳವನು, ರಾಜನಿಂದ ಲಾಭಹೊಂದುತ್ತಾನೆ, ಸದ್ಗುಣದಿಂದ ಪ್ರಖ್ಯಾತನು ಮತ್ತು ಉತ್ತಮ ಪುತ್ರರನ್ನು ಪಡೆಯುತ್ತಾನೆ.

**ಯವನಜಾತಕ**

> **ಭವತಿ ಕರ್ಮಕರೋ ಬಹುನಾಯಕಃ ಸುಕೃತವಾನ್ಸುಹುದಾನಪರಃ ಪುಮಾನ್ ।**
> **ಧನಪತಿರ್ನೃಪತೇರ್ಬಹುವಿತ್ತಭುಕ್ಸುಕೃತಪತೇ ಭವಗೇಹಗತೇ ಸದಾ ॥**

ನವಮೇಶನು ಏಕಾದಶಭಾವದಲ್ಲಿ ಇದ್ದಾಗ ಜಾತಕನು ಕೆಲಸ

ಮಾಡುವವನು, ಅನೇಕರಿಗೆ ನಾಯಕನು, ಪುಣ್ಯವಂತನು, ತುಂಬಾ ದಾನ ಮಾಡುವನು, ಧನಾಧಿಪತಿ ಮತ್ತು ರಾಜನಿಂದ ತುಂಬಾ ದಾನ ಪಡೆಯುತ್ತಾನೆ.

ಅನುಭವದಲ್ಲಿ - ಭಾಗ್ಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನಿಗೆ ಉತ್ತಮ ಲಾಭ ಸಿಗುತ್ತದೆ, ಜಾತಕನು ಗುಣವಂತನು, ಕೀರ್ತಿವಂತನು ಮತ್ತು ಪುಣ್ಯಕಾರ್ಯಗಳನ್ನು ಮಾಡುತ್ತಾನೆ, ದೀರ್ಘಾಯುವು, ಶ್ರೀಮಂತನು ಆಗುತ್ತಾನೆ, ಏಕಾದಶಭಾವಸ್ಥಿತ ಭಾಗ್ಯೇಶನು ಪಂಚಮಭಾವವನ್ನು ನೋಡುವುದರಿಂದ ಜಾತಕನಿಗೆ ಉತ್ತಮ ಸಂತಾನ ಆಗುತ್ತದೆ.

## ೧೦೮. ವ್ಯಯಭಾವಗತ ನವಮೇಶಫಲ

**ಪರಾಶರಹೋರಾ**

ಭಾಗ್ಯೇಶೋ ವ್ಯಯಭಾವಸ್ಥೋ ಭಾಗ್ಯಹಾನಿಕರೋ ನೃಣಾಮ್ ।
ಶುಭಕಾರ್ಯೇ ವ್ಯಯೋ ನಿತ್ಯಂ ನಿರ್ಧನೋಽತಿಥಿಸಙ್ಗಮಾತ್ ॥

ನವಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಭಾಗ್ಯ ಹಾನಿಕರನು ಆಗುತ್ತಾನೆ. ದಿನಲೂ ಸತ್ಕರ್ಮಮಾಡುವುದರಿಂದ ಧನವ್ಯಯ ಆಗುತ್ತದೆ, ಅತಿಥಿ ಸತ್ಕಾರದಿಂದ ನಿರ್ಧನನು ಆಗುತ್ತಾನೆ.

**ಮಾನಸಾಗರೀ**

ದ್ವಾದಶಗೇ ಸುಕೃತೇಶೇ ಮಾನೀ ದೇಶಾಂತರೇ ಸುರೂಪಶ್ಚ ।
ವಿದ್ಯಾವಾಂಛುಭಖೇಟೇ ಕ್ರೂರೇ ಚ ಭವೇದ್‌ಅತಿಧೂರ್ತಃ ॥

ನವಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಅಭಿಮಾನಿ, ಪರದೇಶದಲ್ಲಿ ಇರುತ್ತಾನೆ, ರೂಪವಂತನು ಆಗಿರುತ್ತಾನೆ, ನವಮಾಧಿಪತಿಯು ಶುಭಗ್ರಹನಾದರೆ ವಿದ್ಯಾವಂತನು ಆಗುತ್ತಾನೆ. ನವಮಾಧಿಪತಿಯು ಕ್ರೂರಗ್ರಹನಾದರೆ ಜಾತಕನು ಅತಿಧೂರ್ತನು ಆಗುತ್ತಾನೆ.

**ಯವನಜಾತಕ**

ವ್ಯಯಗತ ಸುಕೃತಾಧಿಪತಿರ್ಯದಾ ಭವತಿ ಮಾನಯುತಃ ಪರದೇಶಗಃ ।
ಮತಿಯುತ ಸ್ತ್ವತಿಸುಂದರ ದೇಹಯುಗ್ಯದಿ ಖಲಾಚ್ಚ ಸ್ವಗಾದಿಹ ಧೂರ್ತಕಃ ॥

ನವಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಮಾನವಂತನಾಗಿ ಪರದೇಶದಲ್ಲಿ ಇರುತ್ತಾನೆ, ಅತಿಸುಂದರ ದೇಹದವನು, ನವಮೇಶನು ಕ್ರೂರಗ್ರಹನಾದರೆ ಜಾತಕನು ಧೂರ್ತನು ಆಗುತ್ತಾನೆ.

ಅನುಭವದಲ್ಲಿ - ಭಾಗ್ಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಅಧಿಕ ಖರ್ಚು ಮತ್ತು ನೂತನ ಮನೆ ಕಟ್ಟುವುದರಿಂದ ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ, ವಿದೇಶದಲ್ಲಿ ಉದ್ಯೋಗದಲ್ಲಿದ್ದು ಧನಗಳಿಸಿ ಅಭಿವೃದ್ಧಿಹೊಂದುತ್ತಾನೆ. ಭಾಗ್ಯೇಶನು ಪಾಪ ಗ್ರಹನಾದರೆ ಅನಾವಶ್ಯಕ ವ್ಯಯದಿಂದ ಧನನಷ್ಟವಾಗಿ ಸಂಕಷ್ಟಕ್ಕೀಡಾಗುತ್ತಾನೆ.

## ಲಗ್ನಾದಿಭಾವಗತ ದಶಮೇಶಫಲ

## ೧೦೯. ಲಗ್ನಭಾವಗತ ದಶಮೇಶಫಲ

**ಪರಾಶರಹೋರಾ**

**ಕರ್ಮೇಶೇ ಲಗ್ನಗೇ ಜಾತೋ ವಿದ್ವಾನ್ ಖ್ಯಾತೋ ಧನೀ ಕವಿಃ ।**
**ಬಾಲ್ಯೇ ರೋಗೀ ಸುಖೀ ಪಶ್ಚಾತ್ ಧನವೃದ್ಧಿರ್ದಿನೇ ದಿನೇ ॥**

ದಶಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ಪಂಡಿತನು, ಧನವಂತನು ಮತ್ತು ಕವಿಯು ಆಗಿರುತ್ತಾನೆ, ಬಾಲ್ಯಕಾಲದಲ್ಲಿ ರೋಗಿಯು ಮತ್ತು ಸುಖಿವಂತನು ಆಗಿರುತ್ತಾನೆ, ಅನಂತರ ದಿನದಿಂದ ದಿನಕ್ಕೆ ಧನ ಮತ್ತು ಅಭಿವೃದ್ಧಿ ಆಗುತ್ತದೆ.

**ಮಾನಸಾಗರೀ**

**ದಶಮಪತೌ ಲಗ್ನಗತೇ ಮಾತರಿ ವೈರೀ ಪಿತುರ್ಭಕ್ತಃ ।**
**ಮೃತ್ಯುಂ ಗತೇ ಚ ತಾತೇ ಖಲು ಪರಪುರುಷರತಾ ಭವತಿ ಮಾತಾ ॥**

ದಶಮೇಶನು ಲಗ್ನದಲ್ಲಿ ಇದ್ದಾಗ ಜಾತಕನು ತಾಯಿಯ ವೈರಿಯು, ತಂದೆಯ ಭಕ್ತನು ಆಗುತ್ತಾನೆ, ತಂದೆಯ ಅವಸಾನದ ನಂತರ ತಾಯಿಯು ಪರಪುರುಷರತಳು ಆಗುತ್ತಾಳೆ.

> ದಶಮಪೇ ತನುಗೇ ಜನನೀಸುಖಿ ಪಿತರಿ ಭಕ್ತಿಪರಃ ಸುಖಸಂಯುತಃ ।
> ಖಲಖಗೈರ್ಬಹು ದುಃಖಪರಃ ಖಲೋ ಜನಕ ವಂಚನಕೃಚ್ಚ ಸುಖಾನ್ವಿತಃ ॥

ದಶಮೇಶನು ಲಗ್ನದಲ್ಲಿ ಇದ್ದಾಗ ಜಾತಕನಿಗೆ ತಾಯಿಯಿಂದ ಸುಖ, ತಂದೆಯ ಭಕ್ತಿಯಲ್ಲಿ ತತ್ಪರನು, ಸುಖದಿಂದ ಕೂಡಿದವನು ಆಗುತ್ತಾನೆ. ದಶಮೇಶನು ಕ್ರೂರಗ್ರಹನಾಗಿ ಲಗ್ನದಲ್ಲಿ ಇದ್ದಾಗ ಜಾತಕನು ಬಹು ದುಃಖವಂತನು, ದುಷ್ಟನು, ತನ್ನ ತಂದೆಗೆ ವಂಚನೆ ಮಾಡುತ್ತಾನೆ ಮತ್ತು ಸುಖವಂತನು ಆಗುತ್ತಾನೆ.

ಅನುಭವದಲ್ಲಿ – ದಶಮೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಪರಿಶ್ರಮ ಮತ್ತು ಬುದ್ಧಿವಂತಿಕೆಯಿಂದ ದುಡಿದು ಮಧ್ಯವಯಸ್ಸಿನ ನಂತರ ಸ್ವತಂತ್ರ ಉದ್ಯಮಗಳನ್ನು ನೆರವೇರಿಸಿ ಅಭಿವೃದ್ಧಿ ಹೊಂದಿ ಧನ-ಸಂಪತ್ತನ್ನು ಗಳಿಸುತ್ತಾನೆ, ದಶಮೇಶನು ಕ್ರೂರಗ್ರಹನಾಗಿ ಲಗ್ನದಲ್ಲಿದ್ದರೆ, ಜಾತಕನು ಕೋಪಿಷ್ಠನು, ಹಠವಾದಿಯು, ಕಲಹ ಮತ್ತು ಜಗಳದಿಂದ ದುಃಖಿತನು ಆಗುತ್ತಾನೆ. ಕರ್ಮಕ್ಷೇತ್ರದಲ್ಲಿ ಕೆಲವೊಮ್ಮೆ ವಂಚನೆಯಿಂದ ಧನಗಳಿಸುತ್ತಾನೆ, ಆದರೆ ಮಾನಸಿಕ ಅಶಾಂತಿಯಿಂದ ಪೀಡಿತನು ಆಗುತ್ತಾನೆ.

## ೧೧೦. ದ್ವಿತೀಯಭಾವಗತ ದಶಮೇಶಫಲ

ಪರಾಶರಹೋರಾ

> ರಾಜ್ಯೇಶೇ ಧನಭಾವಸ್ಥೇ ಧನಾವಾನ್ ಗುಣಸಂಯುತಃ ।
> ರಾಜಮಾನ್ಯೋ ವದಾನ್ಯಶ್ಚ ಪಿತ್ರಾದಿಸುಖಸಂಯುತಃ ॥

ದಶಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಧನವಂತನು, ಉತ್ತಮ ಗುಣಗಳಿಂದ ಕೂಡಿರುವವನು, ರಾಜನಿಂದ ಸನ್ಮಾನಿತನು, ದಾನಶೀಲನು, ತಂದೆಮೊದಲಾದವರಿಂದ ಸುಖಯುಕ್ತನು ಆಗುತ್ತಾನೆ.

ಮಾನಸಾಗರೀ

> ವಿತ್ತಸ್ಥೇ ಗಗನಪತೌ ಮಾತ್ರಾಪಾಲ್ಯಃ ಸುತೋ ಭವತಿ ಲೋಭೀ ।
> ಮಾತರಿ ದುಷ್ಟೋ ನಿತರಾಂ ಸ್ವಲ್ಪಗ್ರಾಸೀ ಶ್ರುತಸುಕರ್ಮಾ ಚ ॥

ದಶಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ತಾಯಿಯಿಂದ ಪೋಷಿಸಲ್ಪಡುತ್ತಾನೆ, ಜಾತಕನು ಲೋಭಿಯು, ತಾಯಿಯ ಪ್ರತಿ ದುಷ್ಟನು, ನಿರಂತರ ಅಲ್ಪ ಆಹಾರ ತಿನ್ನುತ್ತಾನೆ, ಕೇಳುವವನು (ಕೀರ್ತನೆ, ಪುರಾಣಾದಿ) ಮತ್ತು ಸತ್ಕರ್ಮ ಮಾಡುತ್ತಾನೆ.

**ಯವನಜಾತಕ**

> **ಭವತಿ ವಿತ್ತಗತೇ ಗಗನಾಧಿಪೇ ಜನಕಮಾತೃಸುಖಂ ಶುಭಖೇಚರೈಃ ।**
> **ಕಠಿನ ದುಷ್ಟವಚಸ್ತನುಭುಜನರಃ ಸುತನುಕರ್ಮಕರೋ ಧನವಾನ್ಭವೇತ್ ॥**

ದಶಮೇಶನು ದ್ವಿತೀಯಭಾವದಲ್ಲಿ ಶುಭಗ್ರಹನಾಗಿದ್ದರೆ ಜಾತಕನು ತಂದೆ-ತಾಯಿಯ ಸುಖಪಡೆಯುತ್ತಾನೆ, ಕಟುವಾದ ಕೆಟ್ಟಮಾತುಗಳನ್ನು ಆಡುವವನಾಗಿ, ಸುಂದರ ಶರೀರದವನು ಹಾಗೂ ಒಳ್ಳೆಯ ಕಾರ್ಯಗಳನ್ನು ಮಾಡುವವನು ಮತ್ತು ಧನವಂತನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ವಾಕ್ ಚಾತುರ್ಯದಿಂದ ನ್ಯಾಯರೀತಿಯಲ್ಲಿ ವ್ಯಾಪಾರ-ವ್ಯವಹಾರ ನಿರ್ವಹಿಸಿ ಅಭಿವೃದ್ಧಿ ಹೊಂದುತ್ತಾನೆ, ಉತ್ತಮ ಗುಣವಂತನು, ಆಕರ್ಷಕ ವ್ಯಕ್ತಿತ್ವ, ಮಾತೃ ಸುಖ ಉಳ್ಳವನು ಮತ್ತು ಸತ್ಕರ್ಮ ಸದಾಚಾರವಂತನು ಆಗುತ್ತಾನೆ, ಸಾಮಾಜಿಕ ಚಟುವಟಿಕೆಯಲ್ಲಿ ಭಾಗವಹಿಸುತ್ತಾನೆ ಮತ್ತು ಸಂಘ-ಸಂಸ್ಥೆಗಳ ಆಡಳಿತಾಧಿಕಾರಿಯಾಗಿ ಕೀರ್ತಿವಂತನು ಆಗುತ್ತಾನೆ.

## ೧೧೧. ತೃತೀಯಭಾವಗತ ದಶಮೇಶಫಲ

**ಪರಾಶರಹೋರಾ**

> **ಕರ್ಮೇಶೇ ಸಹಜೇ ಜಾತೋ ಭ್ರಾತೃ ಭೃತ್ಯ ಸುಖಾನ್ವಿತಃ ।**
> **ವಿಕ್ರಮೀ ಗುಣಸಂಪನ್ನಃ ವಾಗ್ಮೀ ಸತ್ಯರತೋ ನರಃ ॥**

ದಶಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರು ಮತ್ತು ಸೇವಕರಿಂದ ಸುಖ ಉಳ್ಳವನು ಆಗುತ್ತಾನೆ, ಪರಾಕ್ರಮಿಯು, ಗುಣಸಂಪನ್ನನು, ವಾಕ್‌ಚಾತುರ್ಯ ಉಳ್ಳವನು ಮತ್ತು ಸತ್ಯವಂತನು ಆಗುತ್ತಾನೆ.

**ಮಾನಸಾಗರೀ**

**ಮಾತೃಸ್ವಜನವಿರೋಧೀ ಸೇವಾನಿರತೋ ನ ಕರ್ಮಣಿ ಸಮರ್ಥಃ ।**
**ಮಾತುಲಪರಿಪಾಲಿತಃ ಸ್ಯಾದ್ದಶಮಪತೌ ಸಹಜಭವನಸ್ಥೇ ॥**

ದಶಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ತನ್ನ ತಾಯಿ ಮತ್ತು ಸ್ವಜನರ ವಿರೋಧಿಯು, ಸೇವಾಕಾರ್ಯಗಳಲ್ಲಿ ನಿರತನು, ಕಾರ್ಯ ನಿರ್ವಹಣೆಯಲ್ಲಿ ಅಸಮರ್ಥನು ಮತ್ತು ಸೋದರ ಮಾವನಿಂದ ಪೋಷಿಸಲ್ಪಡುತ್ತಾನೆ.

**ಯವನಜಾತಕ**

**ಸ್ವಜನಮಾತೃವಿರೋಧಕರಃ ಸದಾ ಬಹುಲಸೇವಕಕರ್ಮಕರೋ ಭವೇತ್ ।**
**ತದನು ಮಾತುಲಪುತ್ರ ಸುಖೋಲ್ಪಕೋ ನ ಹಿ ಸಮರ್ಥವಪುಃ ಪೃಥುಕರ್ಮಣಿ ॥**

ದಶಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸ್ವಜನರೊಂದಿಗೆ ಮತ್ತು ತಾಯಿಯೊಂದಿಗೆ ವಿರೋಧ ಮಾಡುವವನು, ಇವನ ಸೇವಕರು ಯಾವಾಗಲೂ ಅನೇಕ ಕರ್ಮಮಾಡುವವರು, ಸೋಧರ ಮಾವನ ಪುತ್ರನಿಂದ ಅಲ್ಪ ಸುಖ ಪಡೆಯುತ್ತಾನೆ ದೊಡ್ಡದಾದ ಕರ್ಮಗಳನ್ನು ಮಾಡುವಲ್ಲಿ ಅಸಮರ್ಥನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರ ಹಿತಚಿಂತಕನು ಅವರ ಅಭಿವೃದ್ಧಿಗೆ ಸಹಾಯಕನು ಆಗುತ್ತಾನೆ, ಕರ್ಮಕ್ಷೇತ್ರದಲ್ಲಿ ಹಲವಾರು ಅಡ್ಡಿಆತಂಕಗಳು ಇರುತ್ತವೆ, ಇವರು ಸತತ ಪ್ರಯತ್ನ ಮತ್ತು ಬುದ್ಧಿವಂತಿಕೆಯಿಂದ ಪರಿಸ್ಥಿತಿಗೆ ಅನುಕೂಲರಾಗಿ ಹೊಂದಿಕೊಂಡು ಚತುರತೆ ಮತ್ತು ಕಾರ್ಯಸಾಧನೆಯಿಂದ ಅಭಿವೃದ್ಧಿ ಹೊಂದಿ ಧನ-ಸಂಪತ್ತನ್ನು ಗಳಿಸುತ್ತಾರೆ.

## ೧೧೨. ಚತುರ್ಥಭಾವಗತ ದಶಮೇಶಫಲ

**ಪರಾಶರಹೋರಾ**

**ಕರ್ಮೇಶೇ ಸುಖ ಭಾವಸ್ಥೇ ಸುಖೀ ಮಾತೃಹಿತೇ ರತಃ ।**
**ಯಾನ ಭೂಮಿ ಗೃಹಾಧೀಶೋ ಗುಣವಾನ್ ಧನವಾನಪಿ ॥**

ದಶಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ತಾಯಿಯ ಯೋಗ್ಯವಾದ ಸೇವೆಯಲ್ಲಿ ನಿರತನು, ವಾಹನ, ಭೂಮಿ, ಮನೆಯ ಒಡೆಯನು, ಗುಣವಂತನು ಮತ್ತು ಧನವಂತನು ಕೂಡಾ ಆಗಿರುತ್ತಾನೆ.

**ಮಾನಸಾಗರೀ**

> ವ್ಯೋಮಪತೌ ತುರ್ಯಗತೇ ಸುಖೀ ತು ವಿರತಃ ಸದಾಚಾರಃ ।
> ಭಕ್ತಶ್ಚ ಮಾತೃಪಿತ್ರೋರ್ನೃಪಮಾನೀ ಜಾಯತೇ ಪುರುಷಃ ॥

ದಶಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಸುಖರಹಿತನು, ಸದ್ಗುಣವಂತನು, ತಾಯಿ-ತಂದೆಯ ಭಕ್ತನು ಮತ್ತು ರಾಜನಿಂದ ಸನ್ಮಾನಿತನು ಆಗುತ್ತಾನೆ.

**ಯವನಜಾತಕ**

> ದಶಮಪೇಽಮ್ಬುಗತೇ ನಿತರಾಂ ಸುಖೀ ಪಿತರೀ ಮಾತಾರಿ ಪೋಷಣತತ್ಪರಃ ।
> ಸಕಲಲೋಕದಶಾಮಪಿ ತಾಪಕೃನ್ನೃಪತಿ ಸಂಭವ ಲಾಭವಿಭೂಷಿತಃ ॥

ದಶಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಅತ್ಯಂತ ಸುಖವಂತನು, ತಂದೆ-ತಾಯಿಯ ಪೋಷಣೆಯಲ್ಲಿ ತತ್ಪರನು, ಜನರ ಕಷ್ಟಕರ ಅವಸ್ಥೆಯಿಂದ ದುಃಖಿತನು ಮತ್ತು ರಾಜನಿಂದ ಲಾಭ ಪಡೆಯುತ್ತಾನೆ.

ಅನುಭವದಲ್ಲಿ - ದಶಮೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಹೆತ್ತವರ ಭಕ್ತನು, ಸಮಾಜಸೇವೆ ಮಾಡುತ್ತಾನೆ, ಉದ್ಯೋಗ ಕ್ಷೇತ್ರದಲ್ಲಿ ಪರಿಶ್ರಮ ಮತ್ತು ಚತುರತೆಯಿಂದ ದುಡಿದು ಅಭಿವೃದ್ಧಿ ಹೊಂದುತ್ತಾರೆ, ಸ್ವಾರ್ಜಿತವಿತ್ತ, ಭೂಮಿ, ವಾಹನ ಮತ್ತು ಮನೆಯನ್ನು ಪಡೆಯುತ್ತಾನೆ, ಮನೆಯಲ್ಲಿ ದೇವತಾರಾಧನೆ ಮತ್ತು ಕುಲದೇವರ ಸೇವೆ, ಪೂಜೆ ಇತ್ಯಾದಿಯಿಂದ ಅಭಿವೃದ್ಧಿ ಹೊಂದುತ್ತಾರೆ.

## ೧೧೩. ಪಂಚಮಭಾವಗತ ದಶಮೇಶಫಲ

**ಪರಾಶರಹೋರಾ**

> ಕರ್ಮೇಶೇ ಸುತಭಾವಸ್ಥೇ ಸರ್ವವಿದ್ಯಾಸಮನ್ವಿತಃ ।
> ಸರ್ವದಾ ಹರ್ಷಸಂಯುಕ್ತೋ ಧನವಾನ್ ಪುತ್ರವಾನಪಿ ॥

ದಶಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಎಲ್ಲ ವಿಧದ ವಿದ್ಯೆಯನ್ನು ಬಲ್ಲವನು, ಯಾವಾಗಲೂ ಸಂತೋಷದಲ್ಲಿ ಇರುತ್ತಾನೆ, ಧನವಂತನು ಮತ್ತು ಪುತ್ರವಂತನು ಆಗುತ್ತಾನೆ.

**ಮಾನಸಾಗರೀ**

**ಶುಭಕರ್ಮಕೋ ವಿಡಂಬೀ ನೃಪಲಾಭೀ ಗೀತವಾದ್ಯನಿರತಃ ಸ್ಯಾತ್ ।**
**ಗಗನಪತೌ ತನಯಗತೇ ಪಾಲಯತಿ ಚ ತಂ ಸುತಂ ಮಾತಾ ॥**

ದಶಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಶುಭಕರ್ಮಗಳನ್ನು ಮಾಡುವವನು, ಅನುಸರಿಸುವವನು, ಅಣಕಿಸುವವನು, ರಾಜನಿಂದ ಲಾಭಗಳಿಸುತ್ತಾನೆ, ಗಾನ ಮತ್ತು ವಾದ್ಯದಲ್ಲಿ ನಿರತನು ಮತ್ತು ಆತನ ಪಾಲನ-ಪೋಷಣೆಯನ್ನು ಆತನ ತಾಯಿಯು ಮಾಡುತ್ತಾಳೆ.

**ಯವನಜಾತಕ**

**ಭವತಿ ಸುಂದರಕರ್ಮಕರೋ ನರೋ ನೃಪತಿಲಾಭಯುತೋಽಪ್ಯತಿಭೋಗವಾನ್ ।**
**ವಿಮಲಗಾನಕಲಾಕುಶಲಃ ಸ್ಮೃತೋ ಗಗನಪೇ ಸುತಗೇಽಲ್ಪಸುಖೀ ನರಃ ॥**

ದಶಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಸುಂದರ ಕೆಲಸ ಮಾಡುವವನು ಆಗುತ್ತಾನೆ, ರಾಜನಿಂದ ಲಾಭ ಪಡೆಯುತ್ತಾನೆ, ಅತಿಭೋಗವಂತನು, ನಿರ್ಮಲವಾದ ಕಲೆಯಲ್ಲಿ ಕುಶಲನು ಮತ್ತು ಸ್ವಲ್ಪ ಸುಖವಂತನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಹಲವು ವಿದ್ಯೆಗಳನ್ನು ಬಲ್ಲವನು, ಸಂತಾನಸುಖ, ಧನ-ಸಂಪತ್ತು ಮತ್ತು ಸತ್ಕರ್ಮ-ಸದಾಚಾರವಂತನು ಆಗುತ್ತಾನೆ, ಉದ್ಯೋಗ ಕ್ಷೇತ್ರದಲ್ಲಿ ಇವರು ಉತ್ತಮ ಹಾಗೂ ಉಪಯುಕ್ತ ಸಲಹೆಗಳನ್ನು ನೀಡುತ್ತಾರೆ.

## ೧೧೪. ಷಷ್ಠಭಾವಗತ ದಶಮೇಶಫಲ

**ಪರಾಶರಹೋರಾ**

**ಕರ್ಮೇಶೇ ರಿಪುಭಾವಸ್ಥೇ ಪಿತೃಸೌಖ್ಯವಿವರ್ಜಿತಃ ।**
**ಚತುರೋಽಪಿ ಧನೈರ್ಹೀನಃ ಶತ್ರುಭಿಃ ಪರಿಪೀಡಿತಃ ॥**

ದಶಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯ ಸುಖವನ್ನು ಕಳಕೊಂಡವನು, ಚತುರನಾದರೂ ಧನಹೀನನು ಮತ್ತು ಶತ್ರುಗಳಿಂದ ಪೀಡಿತನು ಆಗುತ್ತಾನೆ.

ಮಾನಸಾಗರೀ

> ಅಂಬರಪೇ ರಿಪುಸಂಸ್ಥೇ ಶತ್ರುಭಯಾತ್ಕಾತರಃ ಕಲಹಶೀಲಃ ।
> ಕೃಪಣಃ ಕೃಪಯಾ ಹೀನೋ ನರೋ ನ ರೋಗಿ ಭವತಿ ಲೋಕೇ ॥

ದಶಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳ ಭಯದಿಂದ ಹೆದರುತ್ತಾನೆ, ಕಲಹವಂತನು, ಕೃಪಣನು, ದಯಾಹೀನನು ಮತ್ತು ನಿರೋಗಿಯು ಆಗುತ್ತಾನೆ.

ಯವನಜಾತಕ

> ರಿಪುಗೃಹೇ ದಶಮಾಧಿಪತೌ ಗದೀ ನೃಪತಿವೈರಕರಶ್ಚ ವಿವಾದಕೃತ್ ।
> ಪ್ರಬಲಕಾಮಪರೋಽಪ್ಯಥ ಭಾಗ್ಯತೋ ರಿಪುಗಣಾದ್ಯದಿ ಜೀವತಿ ಜೀವತಿ ॥

ದಶಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ರೋಗಿ, ರಾಜನೊಂದಿಗೆ ವೈರತ್ವಮಾಡುತ್ತಾನೆ, ವಾದ-ವಿವಾದ ಮಾಡುತ್ತಾನೆ, ಅತಿ ಕಾಮಾಸಕ್ತನು, ಭಾಗ್ಯವಶಾತ್ ಶತ್ರು ಸಮೂಹದಿಂದ ಬದುಕುಳಿದರೆ ಜೀವಿಸುತ್ತಾನೆ.

ಅನುಭವದಲ್ಲಿ - ದಶಮೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಸ್ವತಂತ್ರ ಉದ್ಯಮಗಳಲ್ಲಿ ಹಾನಿಸಂಭವಿಸುತ್ತದೆ, ನೌಕರಿಯಲ್ಲಿ ಅಥವಾ ಕಮಿಶನ್ ವ್ಯಾಪಾರ-ವ್ಯವಹಾರ ಮಾಡಿದರೆ ಜಾತಕನಿಗೆ ಅಭಿವೃದ್ಧಿ ಆಗುತ್ತದೆ, (ಸರಕುಗಳನ್ನು ಸಾಲದಲ್ಲಿ ಪಡೆದು ನಗದು ಮಾರಾಟ ಮಾಡಿ ಅನಂತರ ಹಣಪಾವತಿ ಮಾಡಬೇಕು) ಕರ್ಮಕ್ಷೇತ್ರದಲ್ಲಿ ಶತ್ರುಗಳಿಂದ ಪೀಡೆ ಇರುತ್ತದೆ.

## ೧೧೫. ಸಪ್ತಮಭಾವಗತ ದಶಮೇಶಫಲ

ಪರಾಶರಹೋರಾ

> ರಾಜ್ಯೇಶೇ ದಾರಭಾವಸ್ಥೇ ಜಾತೋದಾರಸುಖಾನ್ವಿತಃ ।
> ಮನಸ್ವೀ ಗುಣವಾನ್ ವಾಗ್ಮೀ ಸತ್ಯಧರ್ಮರತಃ ಸದಾ ॥

ದಶಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಸ್ತ್ರೀ ಸುಖದಿಂದ ಕೂಡಿರುವವನು, ಒಳ್ಳೆಯ ಮನಸ್ಸುಳ್ಳವನು, ಸದ್ಗುಣವಂತನು, ವಾಕ್‌ಚಾತುರ್ಯ ಉಳ್ಳವನು, ಯಾವಾಗಲೂ ಸತ್ಯ-ಧರ್ಮದಲ್ಲಿ ನಿರತನು ಆಗುತ್ತಾನೆ.

**ಮಾನಸಾಗರೀ**

**ಸುತವತೀ ಶುಭರೂಪಸಮನ್ವಿತಾ ನಿಜಪತಿಪ್ರತಿಪಾಲನಲಾಲಸಾ ।**
**ಭವತಿ ತಸ್ಯ ಶುಭಂ ಕುರುತೇ ಸದಾ ಪ್ರಿಯತಮಾಂಬರಪೇ ದಯಿತಾಂಗತೇ ॥**

ದಶಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಪುತ್ರವತಿಯು, ಸೌಂದರ್ಯವತಿಯು, ಯಾವಾಗಲೂ ತನ್ನ ಪತಿಯ ಪಾಲನೆಯಲ್ಲಿ ನಿರತಳು ಹಾಗೂ ಯಾವಾಗಲೂ ಪತಿಗೆ ಶುಭ ಮಾಡುವವಳು ಮತ್ತು ಪತಿಯ ಪ್ರೀತಿ ಪಾತ್ರಳು ಆಗಿರುತ್ತಾಳೆ.

**ಯವನಜಾತಕ**

**ಸುತವತೀ ಬಹುರೂಪಸಮನ್ವಿತಾ ರಮಣಮಾತರಿ ಭಕ್ತಿಸಮನ್ವಿತಾ ।**
**ಭವತಿ ತಸ್ಯ ಜನಸ್ಯ ನಿರಂತರಂ ಪ್ರಿಯತಮಾಂಬರಪೇ ದಯಿತಾಂಗತೇ ॥**

ದಶಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಅತಿರೂಪವಂತಳು, ಹಾಗೂ ಪತಿ ಮತ್ತು ಅತ್ತೆಯಲ್ಲಿ ಭಕ್ತಿ ಉಳ್ಳವಳು ಮತ್ತು ಅವರಿಗೆ ಅತಿಪ್ರಿಯಳು ಆಗುತ್ತಾಳೆ.

ಅನುಭವದಲ್ಲಿ - ದಶಮೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನ ಪತ್ನಿಯು ಪತಿಯ ಹಿತಚಿಂತಕಳು, ಜಾತಕನು ಪಾಲು ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಿ ಲಾಭಗಳಿಸುತ್ತಾನೆ, ಜಾತಕನು ತನ್ನ ಪತ್ನಿಯ ಹೆಸರಿನಲ್ಲಿ ಇನ್ನೊಂದು ಸಂಸ್ಥೆ ಅಥವಾ ವ್ಯಾಪಾರವನ್ನು ನಡೆಸಿ ಲಾಭಗಳಿಸುತ್ತಾನೆ, ಜಾತಕನು ಉತ್ತಮ ಗುಣವಂತನು, ನ್ಯಾಯ-ನೀತಿಯಲ್ಲಿ ನಡೆಯುವವನು ಮತ್ತು ಪತ್ನಿ-ಪುತ್ರರೊಂದಿಗೆ ಸುಖವಾಗಿ ಬಾಳುತ್ತಾನೆ.

## ೧೧೬. ಅಷ್ಟಮಭಾವಗತ ದಶಮೇಶಫಲ

**ಪರಾಶರಹೋರಾ**

**ಕರ್ಮೇಶೇ ರಂಧ್ರಭಾವಸ್ಥೇ ಕರ್ಮಹೀನೋ ಭವೇನ್ನರಃ ।**
**ದೀರ್ಘಾಯುರಪ್ಯಸೌ ಜಾತಃಪರನಿಂದಾಪರಾಯಣಃ ॥**

ದಶಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಉದ್ಯೋಗ ರಹಿತನು ಆಗುತ್ತಾನೆ, ದೀರ್ಘಾಯುವು ಆದರೂ ಪರನಿಂದೆಯಲ್ಲಿ ನಿರತನು ಆಗುತ್ತಾನೆ.

ಮಾನಸಾಗರೀ

ಪುಷ್ಕರಪತಿರಷ್ಟಮಗಃ ಕ್ರೂರಂ ಶೂರಂ ಮೃಷಾನ್ವಿತಂ ದುಷ್ಟಮ್ ।
ಮಾತಂ ಸಂತಾಪಕರಂ ಜನಯತಿ ತನುಜೀವಿತಂ ಕಿತವಮ್ ॥

ದಶಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಕ್ರೂರ ಸ್ವಭಾವದವನು, ಶೂರನು, ಸುಳ್ಳು ಮಾತಾಡುವವನು, ದುಷ್ಟನು, ತಾಯಿಗೆ ಕಷ್ಟದಾಯಕನು, ಅಲ್ಪಾಯುಷಿಯು ಮತ್ತು ಜೂಜಾಡುವವನು ಅಥವಾ ಮೋಸಗಾರನು ಆಗುತ್ತಾನೆ.

ಯವನಜಾತಕ

ಅತಿಖಲೋಽನೃತವಾಕ್ಕಪಟೀ ನರಸ್ತದನು ಚೋರಕಲಾಕುಶಲಃ ಸದಾ ।
ಜನನಿಪೀಡನತಾಪಕರಃ ಸದಾ ದಶಮಪೇ ನಿಧನೇ ತನುಜೀವಿತಃ ॥

ದಶಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅತಿದುಷ್ಟನು, ಸುಳ್ಳು ಮಾತಾಡುವವನು, ಮತ್ತು ಕಪಟಿಯು ಆಗುತ್ತಾನೆ, ಅಲ್ಲದೇ ಕಳ್ಳನು, ಕಲಾ-ಕುಶಲನು ಆಗುತ್ತಾನೆ, ಯಾವಾಗಲೂ ತಾಯಿಗೆ ಪೀಡೆ ಇರುವುದರಿಂದ ದುಃಖಿತನು, ಅಲ್ಪಾಯುವು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುಷ್ಯ ಉಳ್ಳವನು, ಇವರು ಉದ್ಯೋಗದಲ್ಲಿದ್ದು ಅಭಿವೃದ್ಧಿ ಹೊಂದಿ ಅನಂತರ ಸ್ವತಂತ್ರ ಉದ್ಯಮ ಮಾಡುತ್ತಾರೆ, ದಶಮೇಶನು ಪಾಪಗ್ರಹನಾದರೆ ಜಾತಕನು ಕ್ರೂರ ಸ್ವಭಾವದವನು, ದುಷ್ಟನು, ಜೂಜಾಡುವವನು ಮತ್ತು ವಂಚಕನು ಆಗುತ್ತಾನೆ.

## ೧೧೭. ನವಮಭಾವಗತ ದಶಮೇಶಫಲ

ಪರಾಶರಹೋರಾ

ರಾಜ್ಯೇಶೇ ಭಾಗ್ಯಭೇ ಜಾತೋ ರಾಜಾ ರಾಜಕುಲೋದ್ಭವಃ ।
ತತ್ಸಮೋಽನ್ಯ ಕುಲೋತ್ಪನ್ನೋ ಧನಪುತ್ರಾದಿಸಂಯುತಃ ॥

ದಶಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ರಾಜನು ಅಥವಾ ರಾಜಕುಲದಲ್ಲಿ ಜನಿಸಿದವನು ಆಗುತ್ತಾನೆ. ಅನ್ಯಕುಲದಲ್ಲಿ ಜನಿಸಿದವನಾದರೆ ಜಾತಕನು ರಾಜತುಲ್ಯನು ಆಗುತ್ತಾನೆ ಹಾಗೂ ಧನ-ಪುತ್ರಾದಿಯಿಂದ ಕೂಡಿರುತ್ತಾನೆ.

ಮಾನಸಾಗರೀ

ಶುಭಶೀಲಃ ಸದ್‌ಬಂಧುಃ ಸನ್ಮಿತ್ರೋ ದಶಮಪೇ ನವಮಲೀನೇ ।
ತನ್ಮಾತಾಪಿ ಸುಶೀಲಾ ಸುಕೃತವತೀ ಸತ್ಯವಚನರತಾ ॥

ದಶಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಸದ್ಗುಣವಂತನು ಉತ್ತಮ ಬಂಧು-ಬಾಂಧವರು ಮತ್ತು ಮಿತ್ರರು ಉಳ್ಳವನು, ಜಾತಕನ ತಾಯಿಯು ಪುಣ್ಯಕರ್ಮ ಮಾಡುವವಳು ಹಾಗೂ ಸತ್ಯ ವಚನದವಳು ಆಗಿರುತ್ತಾಳೆ.

ಯವನಜಾತಕ

ಭವತಿ ನಾ ಸುಭಗಸ್ತನುಜಃ ಸದಾ ಶುಭಸಹೋದರಮಿತ್ರ ಪರಾಕ್ರಮಿ ।
ದಶಮಪ ನವಮಸ್ಥಲಗೇ ನರಃ ಸತತಸತ್ಯವಚಾ ವಸುಶಾಲಿನಃ ॥

ದಶಮೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಸುಂದರವಾದ ಶರೀರದವನು ಉತ್ತಮ ಸಹೋದರರು ಮತ್ತು ಮಿತ್ರರಿಂದ ಕೂಡಿರುವವನು ಮತ್ತು ಪರಾಕ್ರಮಿಯು ಆಗುತ್ತಾನೆ, ಯಾವಾಗಲೂ ಸತ್ಯಮಾತುಗಳನ್ನು ಮಾತಾಡುವವನು ಹಾಗೂ ಧನವಂತನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ನವಮಭಾವದಲ್ಲಿ ಇದ್ದಾಗ ಲಕ್ಷ್ಮೀಯೋಗ ಆಗುತ್ತದೆ, ಜಾತಕನು ಸುಖ-ಸಂಪತ್ತಿನಿಂದ ಕೂಡಿದವನಾಗಿ ಉನ್ನತ ಪದವಿಯನ್ನು ಪಡೆಯುತ್ತಾನೆ, ನೂತನ ಉದ್ಯಮಗಳನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸುತ್ತಾನೆ, ಸತ್ಕರ್ಮ ಸದ್ವಿನಿಯೋಗ ಮಾಡುತ್ತಾನೆ.

## ೧೧೮. ದಶಮಭಾವಗತ ದಶಮೇಶಫಲ

ಪರಾಶರಹೋರಾ

ಕರ್ಮೇಶೇ ರಾಜ್ಯಭಾವಸ್ಥೇ ಸರ್ವಕರ್ಮಪಟುಃ ಸುಖೀ ।
ವಿಕ್ರಮೀ ಸತ್ಯವಕ್ತಾ ಚ ಗುರುಭಕ್ತಿರತೋ ನರಃ ॥

ದಶಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಎಲ್ಲ ಕೆಲಸಗಳಲ್ಲಿ ನಿಪುಣನು, ಸುಖವಂತನು, ಪರಾಕ್ರಮಿಯು, ಸತ್ಯ ಹೇಳುವವನು ಹಾಗೂ ಗುರುಭಕ್ತಿನಿರತನು ಆಗಿರುತ್ತಾನೆ.

ಮಾನಸಾಗರೀ

ಗಗನಪತಿರ್ಗಗನಸ್ಥಃ ಕುರುತೇ ಜನನೀಸುಖಪ್ರದಂ ಪುರುಷಮ್ ।
ಜನನೀಕುಲ ವಿಪುಲಸುಖಂ ಪ್ರಕಥನಘುಟನಾಪಟೀಯಾಂಸಮ್ ॥

ದಶಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತನ್ನ ತಾಯಿಗೆ ಸುಖವನ್ನು ನೀಡುವವನು, ತಾಯಿಯ ಕುಲದಿಂದ ವಿಪುಲವಾದ ಸುಖ, ಪ್ರಸಿದ್ಧನು, ಉತ್ತಮ ನಡತೆಯವನು ಮತ್ತು ಚತುರನು ಆಗುತ್ತಾನೆ.

ಯವನಜಾತಕ

ಜನನಿ ಸೌಖ್ಯಕರಃ ಶುಭದಃ ಶುಭೋ ಭವತಿ ಮಾತೃಕುಲೇಷುರತಃ ಸುಧೀಃ ।
ಅತಿಪಟುಃ ಪ್ರಬಲೋ ದಶಮಾಧಿಪೇ ಸ್ವಗೃಹಗೇ ನೃಪಮಾನಧನಾನ್ವಿತಃ ॥

ದಶಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತಾಯಿಗೆ ಸುಖದಾಯಕನು, ಶುಭಕಾರ್ಯ ಮಾಡುತ್ತಾನೆ, ತಾಯಿಯ ಕುಲದವರಲ್ಲಿ ಪ್ರೀತಿ ಉಳ್ಳವನು ಮತ್ತು ಬುದ್ಧಿವಂತನು ಆಗುತ್ತಾನೆ, ಅತಿಚತುರನು ಮತ್ತು ಬಲಿಷ್ಠನು, ರಾಜನಿಂದ ಸನ್ಮಾನಿತನು ಮತ್ತು ಧನಲಭಿಸುತ್ತದೆ.

ಅನುಭವದಲ್ಲಿ - ದಶಮೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ವ್ಯಾಪಾರ - ವ್ಯವಹಾರದಲ್ಲಿ ಕುಶಲನು ಮತ್ತು ಉತ್ತಮ ಆಡಳಿತಗಾರನು ತಾಯಿಯನ್ನು ಉತ್ತಮರೀತಿಯಲ್ಲಿ ನೋಡಿಕೊಳ್ಳುತ್ತಾನೆ, ಸತ್ಕರ್ಮ-ಸದಾಚಾರವಂತನು, ಚತುರ ಆಡಳಿತಗಾರನು, ಬಲಿಷ್ಠನು, ತಾನಿರುವ ಸಂಘ-ಸಂಸ್ಥೆಗಳನ್ನು ಉನ್ನತಿಗೆ ತರುತ್ತಾನೆ, ಹಾಗೂ ಕೀರ್ತಿವಂತನು, ಸುಖವಂತನು ಆಗುತ್ತಾನೆ.

## ೧೧೯. ಏಕಾದಶಭಾವಗತ ದಶಮೇಶಫಲ

ಪರಾಶರಹೋರಾ

ರಾಜ್ಯೇಶೇ ಲಾಭಭಾವಸ್ಥೇ ಜಾತೋ ಧನಸುತಾನ್ವಿತಃ ।
ಹರ್ಷವಾನ್ ಗುಣವಾಂಶ್ಚಾಪಿ ಸತ್ಯವಕ್ತಾ ಸದಾ ಸುಖೀ ॥

ದಶಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನ ಮತ್ತು ಪುತ್ರರಿಂದ ಕೂಡಿರುತ್ತಾನೆ, ಸಂತೋಷವಂತನು, ಗುಣವಂತನು ಹಾಗೂ ಸತ್ಯವಂತನು ಮತ್ತು ಯಾವಾಗಲೂ ಸುಖವಂತನು ಆಗುತ್ತಾನೆ.

**ಮಾನಸಾಗರೀ**

> ಮಾನಾರ್ಜಿತಾರ್ಥಸಹಿತೋ ಮಾತಾ ಚ ರಕ್ಷಿಣೀ ಭವೇತ್ಸುಖಿನೀ ।
> ದೀರ್ಘಾಯುರ್ಮಾತೃಸುಖೀ ಪುರುಷೋ ಲಾಭಸ್ಥಿತೇಽಂಬರಪೇ ॥

ದಶಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಮಾನ-ಸನ್ಮಾನದಿಂದ ಧನ ಸಂಗ್ರಹ ಮಾಡುತ್ತಾನೆ, ತಾಯಿಯಿಂದ ರಕ್ಷಿತನು ಮತ್ತು ಸುಖವಂತನು, ದೀರ್ಘಾಯುವು ಮತ್ತು ಮಾತೃಸುಖ ಉಳ್ಳವನು ಆಗುತ್ತಾನೆ.

**ಯವನಜಾತಕ**

> ವಿಜಯಲಾಭಯುತಃ ಪ್ರಮದಾನ್ವಿತಃ ಪರಪರಾಜಯತೋ ವಸುಲಾಭವಾನ್ ।
> ಸುತಸುತಾನುಗತೋ ಭವಗೇ ಗೃಹೇ ದಶಮಪೇ ಬಹುಭೃತ್ಯಯುತೋ ನರಃ ॥

ದಶಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ವಿಜಯ, ಲಾಭ ಮತ್ತು ಸ್ತ್ರೀಯರಿಂದ ಕೂಡಿದವನು, ಪರರ ಪರಾಜಯದಿಂದ ಧನಲಾಭ ಆಗುತ್ತದೆ, ಪುತ್ರ-ಪುತ್ರಿಯರು ಮತ್ತು ಸೇವಕರಿಂದ ಕೂಡಿದವನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಸ್ವಾರ್ಜಿತವಿತ್ತ, ಧನ-ಸಂಪತ್ತು ಉಳ್ಳವನು, ಉತ್ತಮ ಗುಣವಂತನು ನ್ಯಾಯವಂತನು ಆಗುತ್ತಾನೆ, ದೀರ್ಘಾಯುವು ಮಾತೃಸುಖ ಉಳ್ಳವನು, ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು ಸಂತಾನ ಸುಖ ಮತ್ತು ಸೇವಕರಿಂದ ಕೂಡಿದವನು ಆಗಿರುತ್ತಾನೆ.

## ೧೨೦. ವ್ಯಯಭಾವಗತ ದಶಮೇಶಫಲ

**ಪರಾಶರಹೋರಾ**

> ರಾಜ್ಯೇಶೇ ವ್ಯಯಭಾವಸ್ಥೇ ತಸ್ಯ ರಾಜಗೃಹೇ ವ್ಯಯಃ ।
> ಶತ್ರುತೋಽಪಿ ಭಯಂ ನಿತ್ಯಂ ಚತುರಶ್ಚಾಪಿ ಚಿಂತಿತಃ ॥

ದಶಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ರಾಜಗೃಹದಲ್ಲಿ ವ್ಯಯ ಆಗುತ್ತದೆ, ಯಾವಾಗಲೂ ಶತ್ರುವಿನಭಯ ಇರುತ್ತದೆ, ಜಾತಕನು ಚತುರನಾದರೂ ಚಿಂತಿತನು ಆಗಿರುತ್ತಾನೆ.

ಮಾನಸಾಗರೀ

ಮಾತ್ರೋಜ್ಝಿತೋ ನಿಜಬಲಃ ಶುಭಕರ್ಮಾ ನೃಪತಿಕರ್ಮರತಚೇತಾಃ ।
ವ್ಯೋಮಪತೌ ವ್ಯಯಸಂಸ್ಥೇ ದೇಶಾಂತರಗತಶ್ಚ ಪಾಪಖಗೇ ॥

ದಶಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ತಾಯಿಯಿಂದ ಬಿಡಲ್ಪಟವನು, ತನ್ನ ಬಲದಿಂದ ಜೀವಿಸುವವನು, ಶುಭಕಾರ್ಯ-ಸಮಾರಂಭ ಮಾಡುವವನು, ರಾಜಕಾರ್ಯದಲ್ಲಿ ನಿರತನು ಮತ್ತು ನಿಷ್ಠೆಯಿಂದ ನಿರ್ವಹಿಸುತ್ತಾನೆ, ದಶಮಾಧಿಪತಿಯು ಪಾಪಗ್ರಹನಾದರೆ ಜಾತಕನು ವಿದೇಶದಲ್ಲಿ ವಾಸಿಸುತ್ತಾನೆ.

ಯವನಜಾತಕ

ನೃಪತಿಕರ್ಮಕರೋ ನಿಜವೀರ್ಯ ಯುಗ್ಮನನೀಸೌಖ್ಯವಿವರ್ಜಿತ ವಕ್ರಧೀಃ ।
ದಶಮಪೇ ವ್ಯಯಗೇ ಪರದೇಶನ್ಯ್ಯಯಪರಶ್ಚ ತಥಾ ಸುಭಗಃ ಸ್ವಯಮ್ ॥

ದಶಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ರಾಜನಸೇವೆಯಲ್ಲಿ ಇರುವವನು, ಪರಾಕ್ರಮವಂತನು, ತಾಯಿಯ ಸುಖವನ್ನು ಕಳಕೊಂಡವನು, ಕುಟಿಲ ಬುದ್ಧಿಯವನು, ಪರದೇಶದಲ್ಲಿ ಇರುವವನು, ಭಾಗ್ಯವಂತನು ಮತ್ತು ಅಧಿಕ ಖರ್ಚು ಮಾಡುವವನು ಆಗುತ್ತಾನೆ.

ಅನುಭವದಲ್ಲಿ - ದಶಮೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಶುಭಸಮಾರಂಭ, ತೀರ್ಥಯಾತ್ರೆ ಪುಣ್ಯಕಾರ್ಯ ಮೊದಲಾದವುಗಳಿಗೆ ಖರ್ಚು ಮಾಡುವುದರಿಂದ ಆರ್ಥಿಕ ಸಂಕಷ್ಟಕ್ಕೀಡಾಗುತ್ತಾರೆ, ಜಾತಕನು ಜ್ಞಾನ ಮತ್ತು ಅನುಭವ ಉಳ್ಳವನು, ಶಾಸ್ತ್ರ ವಿಚಾರ ಬಲ್ಲವನು ಆಗಿರುತ್ತಾನೆ, ವ್ಯಯಭಾವಸ್ಥಿತ ದಶಮೇಶನು ಪಾಪಗ್ರಹನಾದರೆ, ಅನಾವಶ್ಯಕ ಖರ್ಚು, ಅನಾವ್ಯಯದಿಂದ ಧನನಾಶ ಮತ್ತು ನಿದ್ರಾನಾಶ ಆಗುತ್ತದೆ.

# ೧೨೧. ಲಗ್ನಾದಿಭಾವಗತ ಲಾಭೇಶಫಲ

## ಲಗ್ನಭಾವಗತ ಲಾಭೇಶಫಲ

**ಪರಾಶರಹೋರಾ**

**ಲಾಭೇಶೇ ಲಗ್ನಗೇ ಜಾತಃ ಸಾತ್ತ್ವಿಕೋ ಧನವಾನ್ ಸುಖೀ ।**
**ಸಮದೃಷ್ಟಿಃ ಕವಿರ್ವಾಗ್ಮೀ ಸದಾ ಲಾಭ ಸಮನ್ವಿತಃ ॥**

ಲಾಭೇಶನು ಲಗ್ನದಲ್ಲಿ ಇದ್ದಾಗ ಜಾತಕನು ಸತ್ವಗುಣದಿಂದ ಕೂಡಿದವನು, ಧನವಂತನು, ಸುಖವಂತನು ಮತ್ತು ಸಮಾನ ದೃಷ್ಟಿಯವನು, ಕವಿಯು, ವಾಗ್ಮಿಯು ಮತ್ತು ಯಾವಾಗಲೂ ಲಾಭ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

**ಅಲ್ಪಾಯುರ್ಬಲಕಲಿತಃ ಶೂರೋ ದಾತಾ ಜನಪ್ರಿಯಃ ಸುಭಗಃ ॥**
**ಲಾಭಪತೌ ಲಗ್ನಗತೇ ತೃಷ್ಣಾದೋಷಾನ್ಮೃತಿಂ ಲಭತೇ ॥**

ಲಾಭೇಶನು ಲಗ್ನದಲ್ಲಿ ಇದ್ದಾಗ ಜಾತಕನು ಅಲ್ಪಾಯುವು, ಪರಿಪೂರ್ಣ ಬಲಿಷ್ಠನು, ಶೂರನು, ದಾನಿಯು, ಜನರ ಪ್ರೀತಿಪಾತ್ರನು, ಭಾಗ್ಯವಂತನು ಮತ್ತು ಬಾಯಾರಿಕೆಯಿಂದ ಅವಸಾನ ಆಗುತ್ತದೆ.

**ಯವನಜಾತಕ**

**ಭವತಿ ನಾ ಸುಭಗಃ ಸ್ವಜನಪ್ರಿಯಃ ಕಲಿತ ಏವ ವದಾನ್ಯಕುಪುತ್ರವಾನ್ ।**
**ಭವಪತೌ ತನುಗೇ ಚ ಸುಕೃತ್ತಮೋ ನೃಪತಿತೋ ಧನಲಾಭಕರಃ ಸದಾ ॥**

ಲಾಭೇಶನು ಲಗ್ನದಲ್ಲಿ ಇದ್ದಾಗ ಜಾತಕನು ಐಶ್ವರ್ಯವಂತನು, ಸ್ವಜನರ ಪ್ರೀತಿಪಾತ್ರನು, ಉದಾರಪುತ್ರರಿಂದ ಕೂಡಿದವನು, ಸತ್ಕರ್ಮ ಮಾಡುವವನು ಮತ್ತು ಯಾವಾಗಲೂ ರಾಜನಿಂದ ಧನಪಡೆಯುತ್ತಾನೆ.

ಅನುಭವದಲ್ಲಿ - ಲಾಭೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಬಲಿಷ್ಠನು ಜನರ ಪ್ರೀತಿಪಾತ್ರನು, ಧನವಂತನು, ಭಾಗ್ಯವಂತನು ಮತ್ತು ಸುಖವಂತನು ಜಾತಕನು ತನಗೆ ಲಾಭ ಸಿಗುವುದೋ ಎಂದು ಚಿಂತಿಸಿ ಅನಂತರ ಕಾರ್ಯಪ್ರವೃತ್ತನು ಆಗುತ್ತಾನೆ, ಹಿರಿಯ ಸಹೋದರನಿಂದ ಸಹಾಯ ಲಭಿಸುತ್ತದೆ.

ಲಾಭಾಧಿಪತಿಯು ಪಾಪಗ್ರಹನಾದರೆ ಲಾಭದ ಕೆಲಅಂಶ ನಾಶ ಆಗುತ್ತದೆ, ಹಿರಿಯ ಸಹೋದರನೊಂದಿಗೆ ಕಲಹ ಅಥವಾ ಅವನಿಂದ ನಷ್ಟ ಸಂಭವಿಸುತ್ತದೆ, ಕಾಲಿನ ಹಿಂಬದಿಯ ಮಾಂಸಖಂಡದಲ್ಲಿ ವೇದನೆ ಇರುತ್ತದೆ.

## ೧೨೨. ದ್ವಿತೀಯಭಾವಗತ ಏಕಾದಶೇಶಫಲ

**ಪರಾಶರಹೋರಾ**

**ಲಾಭೇಶೇ ಧನಭಾವಸ್ಥೇ ಜಾತಃ ಸರ್ವಧನಾನ್ವಿತಃ ।**
**ಸರ್ವಸಿದ್ಧಿಯುತೋ ದಾತಾ ಧಾರ್ಮಿಕಶ್ಚ ಸುಖೀ ಸದಾ ॥**

ಲಾಭೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಸಕಲಧನ-ಸಂಪತ್ತು ಮತ್ತು ಸಕಲಸಿದ್ಧಿಯಿಂದ ಕೂಡಿದವನು, ದಾನಿಯು, ಧಾರ್ಮಿಕತೆ ಉಳ್ಳವನು ಮುತ್ತು ಯಾವಾಗಲೂ ಸುಖವಂತನು ಆಗುತ್ತಾನೆ.

**ಮಾನಸಾಗರೀ**

**ವಿತ್ತಗತೇ ಲಾಭಪತಾವುತ್ಪನ್ನಭುಗಲ್ಪಭೋಜನೋಽಲ್ಪಾಯುಃ ।**
**ಅಷ್ಟಕಪಾಲೀ ರೋಗೀ ಕ್ರೂರೇ ಸೌಮ್ಯೇ ಚ ಧನಕಲಿತಃ ॥**

ಲಾಭೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಬೆಳೆಸಿ ತಿನ್ನುತ್ತಾನೆ, ಅಲ್ಪಭೋಜನ ಮತ್ತು ಅಲ್ಪಾಯುವು ಆಗುತ್ತಾನೆ. ಲಾಭಾಧಿಪತಿಯು ಕ್ರೂರಗ್ರಹನಾದರೆ ಜಾತಕನು ಅಷ್ಟಕಪಾಲಿ ಪಂಥದವನು ಮತ್ತು ರೋಗಿಯು ಆಗುತ್ತಾನೆ, ಲಾಭಾಧಿಪತಿಯು ಶುಭಗ್ರಹನಾದರೆ ಧನಸಂಚಯ ಮಾಡುತ್ತಾನೆ.

**ಯವನಜಾತಕ**

**ಚಪಲಜೀವಿತಮಲ್ಪಸುಖಂ ತಥಾ ಭವಪತಿರ್ಧನಭಾವಯುತೋ ಯದಿ ।**
**ಖಲಖಗೇ ತ್ವತಿತಸ್ಕರತಾಯುತಃ ಶುಭಖಗೇ ಧನವಾನತಿಜೀವತಿ ॥**

ಲಾಭೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಚಪಲತೆಯಿಂದ ಜೀವಿಸುತ್ತಾನೆ, ಅಲ್ಪಸುಖ ಇರುತ್ತದೆ, ಲಾಭೇಶನು ಕ್ರೂರಗ್ರಹನಾದರೆ ಜಾತಕನು ಕಳ್ಳನು ಆಗುತ್ತಾನೆ ಮತ್ತು ಶುಭಗ್ರಹನಾದರೆ ಧನವಂತನಾಗಿ ದೀರ್ಘಾಯುವು ಆಗುತ್ತಾನೆ.

ಅನುಭವದಲ್ಲಿ - ಲಾಭೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ದಾನಧರ್ಮ ಮಾಡುವವನು, ಅಲ್ಪ ಆಹಾರ, ಧನ ಕೂಡಿಸಿಡುತ್ತಾನೆ, ವ್ಯಾಪಾರ-ವ್ಯವಹಾರವನ್ನು ಚತುರತೆಯಿಂದ ಮಾತಾಡಿ ಕಾರ್ಯಸಾಧನೆಯಿಂದ ಧನಗಳಿಸುತ್ತಾನೆ, ಲಾಭಾಧಿಪತಿಯು ಪಾಪಗ್ರಹನಾದರೆ ಜಾತಕನ ಮಾತಿನಲ್ಲಿ ತೀಕ್ಷ್ಣತೆ ಇರುವುದರಿಂದ ಲಾಭದಹಾನಿಯಾಗುತ್ತದೆ, ಕುಟುಂಬಕಲಹ, ಧನನಷ್ಟ ಸಂಭವಿಸುತ್ತದೆ, ಮೋಸ ಮತ್ತು ವಂಚನೆಯಿಂದ ಧನಗಳಿಸುತ್ತಾನೆ.

## ೧೨೩. ತೃತೀಯಭಾವಗತ ಏಕಾದಶೇಶಫಲ

ಪರಾಶರಹೋರಾ

> ಲಾಭೇಶೇ ಸಹಜೇ ಜಾತಃ ಕುಶಲಃ ಸರ್ವಕರ್ಮಸು ।
> ಧನೀ ಭ್ರಾತೃಸುಖೋಪೇತಃ ಶೂಲರೋಗಭಯಂ ಕ್ವಚಿತ್ ॥

ಲಾಭೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಎಲ್ಲ ಕೆಲಸದಲ್ಲಿ ಕುಶಲನು, ಧನವಂತನು, ಭ್ರಾತೃಸುಖ ಉಳ್ಳವನು ಮತ್ತು ಕೆಲವೊಮ್ಮೆ ಶೂಲರೋಗ ಭಯ ಇರುತ್ತದೆ.

ಮಾನಸಾಗರೀ

> ಬಂಧುಸ್ತ್ರೀಪಾಲನಕಃ ಸುಬಾಂಧವೋ ಬಂಧುವತ್ಸಲಃ ಸುಭಗಃ ।
> ಲಾಭೇಶೇ ಸಹಜಗತೇ ಬಂಧೂನಾಂ ರಿಪುಕುಲಚ್ಛೇತಾ ॥

ಲಾಭೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ತನ್ನ ಸಂಬಂಧದ ಸ್ತ್ರೀಯ ಪಾಲಕನು, ಉತ್ತಮ ಬಾಂಧವರು ಉಳ್ಳವನು, ಭಾಗ್ಯವಂತನು ಮತ್ತು ಬಂಧುಗಳ ಶತ್ರುಕುಲ ನಾಶಮಾಡುವವನು ಆಗುತ್ತಾನೆ.

ಯವನಜಾತಕ

> ಸಹಜವಿತ್ತಯುತಶ್ಚ ಸುಬಾಂಧವಃ ಸಹಜವತ್ಸಲ ಏವ ನರಃ ಸದಾ ।
> ಸಹಜಗೇ ಭವಭಾವಪತೌ ಶುಚಿಃ ಸ್ವಜನಮಿತ್ರಜನಾನತಿಲಾಭದಃ ॥

ಲಾಭೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರ ಧನದಿಂದ ಕೂಡಿದವನು, ಉತ್ತಮ ಬಂಧು-ಬಾಂಧವರು ಉಳ್ಳವನು, ಸಹೋದರರಿಗೆ ಪ್ರಿಯನು, ಪರಿಶುದ್ಧನು ಹಾಗೂ ಸ್ವಜನರಿಗೆ ಮತ್ತು ಮಿತ್ರಜನರಿಗೆ ಲಾಭದಾಯಕನು ಆಗಿರುತ್ತಾನೆ.

ಅನುಭವದಲ್ಲಿ - ಲಾಭೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ವ್ಯಾಪಾರ-ವ್ಯವಹಾರವನ್ನು ಪ್ರಯತ್ನ ಮತ್ತು ಚತುರತೆಯಿಂದ ನಿರ್ವಹಿಸಿ ಲಾಭಗಳಿಸುತ್ತಾನೆ, ಉದ್ಯೋಗ ಕ್ಷೇತ್ರದಲ್ಲಿದ್ದರೆ ವಂಚನೆಯಿಂದ ಕಳ್ಳತನದಿಂದ ಅಥವಾ ಲಂಚ ಮೊದಲಾದ ಅನೈತಿಕ ವಿಧಾನದಿಂದ ಧನಗಳಿಸುತ್ತಾನೆ, ಸಹೋದರರ ಸಹಾಯ ಲಭಿಸುತ್ತದೆ, ಮಧ್ಯ ಪ್ರಾಯದ ನಂತರ ಕುತ್ತಿಗೆ ಅಥವಾ ಎದೆ ನೋವು ಇರುತ್ತದೆ.

## ೧೨೪. ಚತುರ್ಥಭಾವಗತ ಏಕಾದಶೇಶಫಲ

**ಪರಾಶರಹೋರಾ**

ಲಾಭೇಶೇ ಸುಖಭಾವಸ್ಥೇ ಲಾಭೋ ಮಾತೃಕುಲಾದ್ ಭವೇತ್ ।
ತೀರ್ಥಯಾತ್ರಾಕರೋ ಜಾತೋ ಗೃಹಭೂಮಿಸುಖಾನ್ವಿತಃ ॥

ಲಾಭೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ತಾಯಿಯ ಕುಲದವರಿಂದ ಲಾಭ ಆಗುತ್ತದೆ, ತೀರ್ಥಯಾತ್ರೆ ಮಾಡುತ್ತಾನೆ ಗೃಹಸುಖ ಮತ್ತು ಭೂಮಿ ಸುಖ ಲಭಿಸುತ್ತದೆ.

**ಮಾನಸಾಗರೀ**

ತುರ್ಯಸ್ಥೇ ಲಾಭೇಶೇ ದೀರ್ಘಾಯುಃ ಪಿತರಿ ಭಕ್ತಿಭಾಗ್ಯವತಿ ।
ಸಮಯ್ಯೈಕ ಕರ್ಮನಿರತಃ ಸ್ವಧರ್ಮನಿರತಶ್ಚ ಲಾಭವಾನ್ ಮನುಜಃ ॥

ಲಾಭೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುವು, ತನ್ನ ತಂದೆಯಲ್ಲಿ ಭಕ್ತಿ ಮತ್ತು ಶ್ರದ್ಧೆ ಉಳ್ಳವನು, ಒಮ್ಮೆ ಒಂದೇ ಕಾರ್ಯನಿರತನು, ತನ್ನ ಧರ್ಮದಲ್ಲಿ ಲೀನನು ಹಾಗೂ ಲಾಭ ಅಥವಾ ಜಯಗಳಿಸುತ್ತಾನೆ.

**ಯವನಜಾತಕ**

ಅಮಿತಜೀವನಯುಕ್ ಪಿತೃಪಂಕ್ತಿಯುಕ್ತನಯಕರ್ಮರತಃ ಸುಭಗಃಶುಭಃ ।
ಸುಕೃತಕರ್ಮವಶಾದತಿಲಾಭವಾನ್ಸುಖಗತೇ ಭವಭಾವಪತೌ ಭವೇತ್ ॥

ಲಾಭೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಅಮಿತಾಯುವು (100 ವರ್ಷಕ್ಕೆ ಮೇಲ್ಪಟ್ಟ ಆಯುರ್ದಾಯ), ತಂದೆಯಿಂದ ಕೂಡಿರುವವನು, ತನ್ನ ಪುತ್ರನ ಕೆಲಸದಲ್ಲಿ ಆಸಕ್ತನು, ಐಶ್ವರ್ಯವಂತನು, ಶುಭತ್ವ ಮತ್ತು ಅತಿ ಪುಣ್ಯಕರ್ಮದಿಂದ ಅತಿಲಾಭಪಡೆಯುತ್ತಾನೆ.

ಅನುಭವದಲ್ಲಿ – ಲಾಭೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನಿಗೆ ಸೋದರ ಮಾವನಿಂದ ಸಹಾಯ ಹಾಗೂ ಲಾಭ ಆಗುತ್ತದೆ, ಭೂಮಿ, ನೂತನಗೃಹ ಲಭಿಸುತ್ತದೆ, ದೀರ್ಘಾಯುವು ಮತ್ತು ಹತ್ತಿರದ ಸುಖ ಉಳ್ಳವನು, ಧಾರ್ಮಿಕ ಕಾರ್ಯದಲ್ಲಿ ನಿರತನು ಮತ್ತು ಧನವಂತನು ಪುಣ್ಯವಂತನು ಆಗುತ್ತಾನೆ.

## ೧೨೫. ಪಂಚಮಭಾವಗತ ಏಕಾದಶೇಶಫಲ

**ಪರಾಶರಹೋರಾ**

**ಲಾಭೇಶೇ ಸುತಭಾವಸ್ಥೇ ಭವಂತಿ ಸುಖಿನಃ ಸುತಾಃ ।**
**ವಿದ್ಯಾವಂತೋऽಪಿ ಸಚ್ಛೀಲಾಃ ಸ್ವಯಂ ಧರ್ಮರತಃ ಸುಖೀ ॥**

ಲಾಭೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನ ಮಕ್ಕಳು ಸುಖವಂತರು, ವಿದ್ಯಾವಂತರು ಮತ್ತು ಸದ್ಗುಣವಂತರು ಆಗಿರುತ್ತಾರೆ, ಜಾತಕನು ಸ್ವತಹಃ ಧರ್ಮರತನು ಮತ್ತು ಸುಖವಂತನು ಆಗಿರುತ್ತಾನೆ.

**ಮಾನಸಾಗರೀ**

**ಲಾಭಪತಿಃ ಪುತ್ರಗತಃ ಪಿತೃಪುತ್ರಸ್ನೇಹಲಂ ಮಿಥಃ ಕುರುತೇ ।**
**ತುಲ್ಯಗುಣಂ ಚ ಪರಸ್ಪರಮಲ್ಪಾಯುರ್ಜಾಯತೇ ಪುರುಷಃ ॥**

ಲಾಭೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಮತ್ತು ಅವನ ತಂದೆಯಲ್ಲಿ ಸ್ನೇಹ ಇರುತ್ತದೆ, ಹಾಗೂ ಇಬ್ಬರಲ್ಲಿ ಸಮಾನಗುಣ ಇರುತ್ತದೆ, ಜಾತಕನು ಅಲ್ಪಾಯು ಆಗುತ್ತಾನೆ.

**ಯವನಜಾತಕ**

**ಜನಕಸಂಯುತಮಾತೃಜನಪ್ರಿಯಃ ಸುತಗತೇ ಭವಭಾವಪತೌ ನರಃ ।**
**ಶುಭಖಗೈರ್ಮಿತಭುಕ್ಸುಖಸಂಯುತಃ ಖಲಖಗೈರ್ವಿಪರೀತಫಲಂ ಲಭೇತ್ ॥**

ಲಾಭೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನು ತಾಯಿ-ತಂದೆಯ ಪ್ರೀತಿ ಪಾತ್ರನು, ಅಲ್ಪಭೋಜನ ಮಾಡುವವನು, ಸುಖವಂತನು ಆಗುತ್ತಾನೆ, ಲಾಭೇಶನು ಕ್ರೂರಗ್ರಹನಾದರೆ ವಿಪರೀತಫಲ ನೀಡುತ್ತಾನೆ.

ಅನುಭವದಲ್ಲಿ - ಜಾತಕನು ಗಹನವಾಗಿ ಚಿಂತಿಸಿ ವ್ಯಾಪಾರ-ವ್ಯವಹಾರ ನೆರವೇರಿಸುವುದರಿಂದ ಅಭಿವೃದ್ಧಿ ಹೊಂದುತ್ತಾನೆ, ಉತ್ತಮ ಸಂತಾನ ಉಳ್ಳವನು, ಮಕ್ಕಳು ವಿದ್ಯಾವಂತರು, ಗುಣವಂತರು ಮತ್ತು ಸುಖವಂತರು ಆಗುತ್ತಾರೆ.

## ೧೨೬. ಷಷ್ಠಭಾವಗತ ಏಕಾದಶೇಶಫಲ

ಪರಾಶರಹೋರಾ

ಲಾಭೇಶೇ ರೋಗಭಾವಸ್ಥೇ ಜಾತೋ ರೋಗಸಮನ್ವಿತಃ ।
ಕ್ರೂರಬುದ್ಧಿಃ ಪ್ರವಾಸೀ ಚ ಶತ್ರುಭಿ ಪರಿಪೀಡಿತಃ ॥

ಲಾಭೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ರೋಗದಿಂದ ಕೂಡಿದವನು, ಕ್ರೂರ ಬುದ್ಧಿಯವನು, ಪ್ರವಾಸದಲ್ಲಿರುವವನು ಮತ್ತು ಶತ್ರುಗಳಿಂದ ಪೀಡಿತನು ಆಗುತ್ತಾನೆ.

ಮಾನಸಾಗರೀ

ಷಷ್ಠಗತೇ ಲಾಭಪತೌ ಸುದೀರ್ಘರೋಗಿ ಸುವೈರಿಕಲಿತಶ್ಚ ।
ತಸ್ಕರಹಸ್ತಾನ್ಮೃತ್ಯುಃ ಕ್ರೂರೇ ದೇಶಾಂತರಗತಸ್ಯ ॥

ಲಾಭೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ದೀರ್ಘಕಾಲ ರೋಗಿ ಮತ್ತು ಶತ್ರುಗಳಿಂದ ಕೂಡಿದವನು ಆಗುತ್ತಾನೆ, ಲಾಭಾಧಿಪತಿಯು ಕೂರಗ್ರಹನಾಗಿ ಷಷ್ಠಭಾವದಲ್ಲಿ ಇದ್ದಾಗ, ವಿದೇಶದಲ್ಲಿ ಕಳ್ಳರಿಂದ ಜಾತಕನ ಮರಣ ಆಗುತ್ತದೆ.

ಯವನಜಾತಕ

ರಿಪುಯುತೋಽಪಿ ಹಿ ದೀರ್ಘಗದೀ ಕೃಶಶ್ಚತುರತಾಚತುರೈಃ ಸಹ ಸಂಮತಃ ।
ರಿಪುಗತೇ ಭವಪೇ ಚ ವಿದೇಶಗೋ ಮರಣಮೇವ ಚ ತಸ್ಕರಜಂ ಭಯಮ್ ॥

ಲಾಭೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಶತ್ರುಗಳಿಂದ ಕೂಡಿರುವವನು, ದೀರ್ಘಕಾಲ ರೋಗಿ ಆಗುತ್ತಾನೆ, ಕೃಶವಾದ ಶರೀರ, ಚತುರತೆಯಲ್ಲಿ ಚತುರನು, ಗೌರವಕ್ಕೆ ಪಾತ್ರನಾದವನು, ವಿದೇಶದಲ್ಲಿ ಮರಣ ಹೊಂದುತ್ತಾನೆ ಅಥವಾ ಕಳ್ಳರಿಂದ ಭಯ ಇರುತ್ತದೆ.

ಅನುಭವದಲ್ಲಿ - ಲಾಭೇಶನು ಷಷ್ಠಬಾವದಲ್ಲಿ ಇದ್ದಾಗ ಜಾತಕನಿಗೆ

ಅನಾರೋಗ್ಯ, ಆಗ್ಗಾಗ್ಗೆ ಪ್ರಯಾಣ, ಶತ್ರುಗಳಿಂದ ಕಿರುಕುಳ, ಬುದ್ಧಿವಂತನು ಆದರೆ ಕುಹಕತನ ಉಳ್ಳವನು, ಮತ್ತು ಕಳ್ಳರ ಭಯ ಇರುತ್ತದೆ.

## ೧೨೭. ಸಪ್ತಮಭಾವಗತ ಏಕಾದಶೇಶಫಲ

**ಪರಾಶರಹೋರಾ**

> **ಲಾಭೇಶೇ ದಾರಭಾವಸ್ಥೇ ಲಾಭೋ ದಾರಕುಲಾತ್ ಸದಾ ।**
> **ಉದಾರಶ್ಚ ಗುಣೀ ಕಾಮೀ ಜನೋ ಭಾರ್ಯಾವಶಾನುಗಃ ॥**

ಲಾಭೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಪತ್ನಿಯ ಕುಲದವರಿಂದ ಯಾವಾಗಲೂ ಲಾಭ ಆಗುತ್ತದೆ. ಉದಾರತೆ ಉಳ್ಳವನು ಹಾಗೂ ಗುಣವಂತನೂ ಆಗುತ್ತಾನೆ, ಕಾಮಿಯು ಮತ್ತು ಪತ್ನಿಯ ವಶದಲ್ಲಿರುವವನು ಆಗುತ್ತಾನೆ.

**ಮಾನಸಾಗರೀ**

> **ಸಪ್ತಮಗೇ ಲಾಭೇಶೇ ತೇಜಸ್ವೀ ಶೀಲಸಂಪದಃ ಪದವಾನ್ ।**
> **ದೀರ್ಘಾಯುರ್ಭವತಿ ನರಸ್ತ್ವೈಕದಯಿತಾಪತಿರ್ನಿತ್ಯಮ್ ॥**

ಲಾಭೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಗೌರವಾನ್ವಿತನು, ಉತ್ತಮಗುಣ ಸಂಪನ್ನನು, ಉನ್ನತ ಪದವಿಯಲ್ಲಿ ಇರುತ್ತಾನೆ, ದೀರ್ಘಾಯುಷ್ಯ ಉಳ್ಳವನು ಮತ್ತು ಏಕಪತ್ನಿಯವನು ಆಗುತ್ತಾನೆ.

**ಯವನಜಾತಕ**

> **ಪ್ರಕೃತಿಜೋಗ್ರತನುರ್ಬಹುಸಂಪದೋ ಬಹುಲಜೀವಿಯುತಂ ಬಹುಶೀಲಯುಕ್ ।**
> **ಖಲಖಗೈರ್ಬಹುರೋಗಯುತೋ ನರಃ ಶುಭಖಗೈರ್ಬಹುಸೌಖ್ಯಸಮನ್ವಿತಃ ॥**

ಲಾಭೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಉಗ್ರಸ್ವಭಾವದ ಪ್ರಕೃತಿಯವನು, ಹೇರಳ ಸಂಪತ್ತು ಉಳ್ಳವನು, ದೀರ್ಘಕಾಲ ಜೀವಿಸುವವನು, ಶೀಲವಂತನು ಆಗುತ್ತಾನೆ, ಲಾಭೇಶನು ಕ್ರೂರಗ್ರಹನಾದರೆ ಬಹಳರೋಗದಿಂದ ಕೂಡಿದವನು, ಶುಭಗ್ರಹನಾದರೆ ಸುಖದಿಂದ ಕೂಡಿದವನು ಆಗುತ್ತಾನೆ.

ಅನುಭವದಲ್ಲಿ - ಲಾಭೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ಪತ್ನಿಯ ಕಡೆಯವರಿಂದ ಲಾಭಸಿಗುತ್ತದೆ, ಜಾತಕನು ಉದಾರಗುಣದವನು,.

ಉನ್ನತ ಪದವಿ, ಸುಖ-ಸಂಪತ್ತಿನಿಂದ ಕೂಡಿದವನು, ದೀರ್ಘಾಯುಷ್ಯ ಉಳ್ಳವನು ಆಗುತ್ತಾನೆ, ಲಾಭೇಶನು ಪಾಪಗ್ರಹನಾದರೆ ಜಾತಕನಿಗೆ ಶರೀರಿಕ ಪೀಡೆ, ಕಾಲಿನ ನರಗಳ ಸೆಳೆತ ಮತ್ತು ಸ್ವಭಾವದಲ್ಲಿ ತೀಕ್ಷ್ಣತೆ ಇರುತ್ತದೆ.

## ೧೨೮. ಅಷ್ಟಮಭಾವಗತ ಏಕಾದಶೇಶಫಲ

**ಪರಾಶರಹೋರಾ**

> **ಲಾಭೇಶೇ ರಂಧ್ರಭಾವಸ್ಥೇ ಹಾನಿಃ ಕಾರ್ಯೇಷು ಜಾತಯೇ ।**
> **ತಸ್ಯಾಯುಶ್ಚ ಭವೇದ್ದೀರ್ಘಂ ಪ್ರಥಮಂ ಮರಣ ಸ್ತ್ರಿಯಃ ॥**

ಲಾಭೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ಕಾರ್ಯಹಾನಿ (ವ್ಯಾಪಾರ ವ್ಯವಹಾರದಲ್ಲಿ ಹಾನಿ ಆಗುತ್ತದೆ), ಜಾತಕನು ದೀರ್ಘಾಯುಷ್ಯ ಉಳ್ಳವನು ಮತ್ತು ಆತನ ಪತ್ನಿಯ ಅವಸಾನವು ಮೊದಲು ಆಗುತ್ತದೆ.

**ಮಾನಸಾಗರೀ**

> **ಏಕಾದಶಪೇಽಷ್ಟಮಗೇಽಲ್ಪಾಯುರ್ಭವತಿ ಸ ಜಾತಕೋ ರೋಗೀ ।**
> **ಜೀವನ್ಮೃತ್ಯುಶ್ಚ ದುಃಖೀ ಭವತಿ ನರಃ ಸೌಮ್ಯಗಗನಚರೇ ॥**

ಲಾಭೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಲ್ಪಾಯುವು, ರೋಗಿಯು, ಜೀವನ-ಮೃತ್ಯುವಿನೊಡನೆ ಹೋರಾಡಿ ದುಃಖಿತನು ಆಗುತ್ತಾನೆ, ಲಾಭಾಧಿಪತಿಯು ಶುಭಗ್ರಹನಾದರೆ ಜಾತಕನು ಆಕಾಶದಲ್ಲಿ ಸಂಚರಿಸುತ್ತಾನೆ.

**ಯವನಜಾತಕ**

> **ಬಹುಲರೋಗಯುತಶ್ಚ ತಥಾ ಶುಭಃ ಖಚರ ಏವಮಿದಂ ದದತೇಫಲಮ್ ।**
> **ಭವಪತೌ ಮೃತಿಗೇ ರಿಪುವೃನ್ದತೋ ವಿಪುಲವೈರಕರಶ್ಚ ನರಃ ಸದಾ ॥**

ಲಾಭೇಶನು ಶುಭಗ್ರಹನಾಗಿ ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅನೇಕ ವಿಧದ ರೋಗದಿಂದ ಕೂಡಿರುವವನು ಹಾಗೂ ಶತ್ರು ಸಮೂಹದೊಂದಿಗೆ ವೈರತ್ವ ಮಾಡುತ್ತಾನೆ.

ಅನುಭವದಲ್ಲಿ - ಲಾಭೇಶನು ಶುಭಗ್ರಹನಾಗಿ ಅಷ್ಟಭಾವದಲ್ಲಿ ಇದ್ದಾಗ ಜಾತಕನಿಗೆ ಕೈಕೊಂಡ ಕಾರ್ಯದಲ್ಲ ಅಡಚಣೆ, ಅಧಿಕ ಖರ್ಚು ಅಥವಾ ಲಾಭದ

ಹಾನಿ ಸಂಭವಿಸುತ್ತದೆ, ಲಾಭೇಶನು ಪಾಪಗ್ರಹನಾಗಿ ಅಷ್ಟಮಭಾವದಲ್ಲಿ ಇದ್ದಾಗ ಜಾತಕನಿಗೆ ಸಾಲದ ವ್ಯಾಪಾರದಿಂದ ಮತ್ತು ಜಾಮೀನು ವ್ಯವಹಾರದಿಂದ ನಷ್ಟ ಸಂಭವಿಸುತ್ತದೆ, ಲಾಭೇಶನು ಶುಭಗ್ರಹನಾಗಿ ಪಾಪಗ್ರಹರ ಸಂಪರ್ಕ ಇಲ್ಲದೆ ಅಷ್ಟಮಭಾವದಲ್ಲಿದ್ದರೆ ಜಾತಕನಿಗೆ ಧನಪ್ರಾಪ್ತಿಯೋಗ ಇರುತ್ತದೆ.

## ೧೨೯. ನವಮಭಾವಗತ ಏಕಾದಶೇಶಫಲ

**ಪರಾಶರಹೋರಾ**

**ಲಾಭೇಶೇ ಭಾಗ್ಯಭಾವಸ್ಥೇ ಭಾಗ್ಯವಾನ್ ಜಾಯತೇ ನರಃ ।**
**ಚತುರಃ ಸತ್ಯವಾದೀ ಚ ರಾಜಪೂಜ್ಯೋ ಧನಾಧಿಪಃ ॥**

ಲಾಭೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಭಾಗ್ಯವಂತನು, ಚತುರನು, ಸತ್ಯವಂತನು, ರಾಜಪೂಜಿತನು ಮತ್ತು ಧನವಂತನು ಆಗುತ್ತಾನೆ.

**ಮಾನಸಾಗರೀ**

**ಏಕಾದಶೇಶೇ ಸುಕೃತಾಲಯಸ್ಥೇ ಬಹುಶ್ರುತಃ ಶಾಸ್ತ್ರ ವಿಚಾರದಕ್ಷಃ ।**
**ಧರ್ಮ ಪ್ರಸಿದ್ಧೋ ಗುರುದೇವಭಕ್ತಃ ಕ್ರೂರೇ ಚ ಬಂಧುವ್ರತವರ್ಜಿತಶ್ಚ ॥**

ಲಾಭೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಅನೇಕ ವಿಚಾರಗಳನ್ನು ವಿದ್ವಾಂಸರಿಂದ ತಿಳಿಯುತ್ತಾನೆ, ಶಾಸ್ತ್ರ ವಿಚಾರದಲ್ಲಿ ನಿಪುಣನು, ಧಾರ್ಮಿಕ ವಿಚಾರದಲ್ಲಿ ಪ್ರಸಿದ್ಧನು, ಗುರು ಮತ್ತು ದೇವತಾ ಭಕ್ತನು ಆಗಿರುತ್ತಾನೆ.

ಲಾಭೇಶನು ಕ್ರೂರಗ್ರಹನಾಗಿದ್ದರೆ ಜಾತಕನು ಬಂಧುಗಳೊಂದಿಗೆ ಕೂಡಿ ಇರುವುದಿಲ್ಲ.

**ಯವನಜಾತಕ**

**ಏಕಾದಶೇಶಃ ಸುಕೃತೇ ಸ್ಥಿತಶ್ಚೇದ್ಬಹುಶ್ರುತಃ ಶಾಸ್ತ್ರ ವಿಶಾರದಶ್ಚ ।**
**ಧರ್ಮಪ್ರಸಿದ್ಧೋ ಗುರುದೇವಭಕ್ತಃ ಕ್ರೂರೇ ಚ ಬಂಧುವ್ರಜವರ್ಜಿತಶ್ಚ ॥**

ಲಾಭೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಬಹುಪ್ರಸಿದ್ಧನು, ಶಾಸ್ತ್ರವಿಶಾರದನು, ಧರ್ಮಕಾರ್ಯದಿಂದ ಪ್ರಸಿದ್ಧನು, ಮತ್ತು ಗುರು-ದೇವತಾಭಕ್ತನು ಆಗಿರುತ್ತಾನೆ, ಲಾಭೇಶನು, ಪಾಪಗ್ರಹನಾದರೆ ಬಂಧು ಜನರನ್ನು ತ್ಯಜಿಸಿದವನು ಆಗಿರುತ್ತಾನೆ.

ಅನುಭವದಲ್ಲಿ - ಲಾಭೇಶನು ಭಾಗ್ಯಭಾವದಲ್ಲಿ ಇದ್ದಾಗ ಜಾತಕನು, ಬುದ್ಧಿವಂತನು, ನ್ಯಾಯವಂತನು, ನಿಪುಣನು, ಸಮಾಜದಲ್ಲಿ ಸನ್ಮಾನಿತನು, ಸ್ವಾರ್ಜಿತವಿತ್ತ ಉಳ್ಳವನು, ಶಾಸ್ತ್ರಬಲ್ಲವನು, ಗುರು ಮತ್ತು ದೇವರ ಭಕ್ತನು, ಸಮಾಜಸೇವಕನು, ಹೆತ್ತವರ ಸುಖ ಉಳ್ಳವನು, ಮತ್ತು ಪುಣ್ಯ ಕಾರ್ಯಗಳನ್ನು ಮಾಡುತ್ತಾನೆ.

## ೧೩೦. ದಶಮಭಾವಗತ ಏಕಾದಶೇಶಫಲ

**ಪರಾಶರಹೋರಾ**

**ಲಾಭೇಶೇ ಕರ್ಮಭಾವಸ್ಥೇ ಭೂಪವಂದ್ಯೋ ಗುಣಾನ್ವಿತಃ ।**
**ನಿಜಧರ್ಮರತೋ ಧೀಮಾನ್ ಸತ್ಯವಾದೀ ಜಿತೇಂದ್ರಿಯಃ ॥**

ಲಾಭೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜನಿಂದ ಸನ್ಮಾನಿತನು, ಸದ್ಗುಣವಂತನು, ತನ್ನ ಧರ್ಮದಲ್ಲಿ ನಿರತನು, ಬುದ್ಧಿವಂತನು, ಸತ್ಯವಾದಿ ಮತ್ತು ಜಿತೇಂದ್ರಿಯನು ಆಗುತ್ತಾನೆ.

**ಮಾನಸಾಗರಿ**

**ಮಾತರಿ ಭಕ್ತಃ ಸುಕೃತಿ ಪಿತರಿ ದ್ವೇಷೀ ಸುದೀರ್ಘತರಜೀವೀ ।**
**ಧನವಾಂಜನನೀಪಾಲನನಿರತೋ ಲಾಭಾಧಿಪೇ ಖಗತೇ ॥**

ಲಾಭೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತಾಯಿಯಲ್ಲಿ ಪ್ರೀತಿ ಉಳ್ಳವನು, ಶುಭಕಾರ್ಯ ಮಾಡುವವನು, ತಂದೆಯೊಂದಿಗೆ ದ್ವೇಷ ಉಳ್ಳವನು, ದೀರ್ಘಾಯುವು ಆಗುತ್ತಾನೆ, ಧನವಂತನು, ತಾಯಿಯ ಪಾಲನೆಯಲ್ಲಿ ಅನುರಕ್ತನು ಆಗಿರುತ್ತಾನೆ.

**ಯವನಜಾತಕ**

**ಪಿತರಿ ವೈರಯುತೋ ಜನನೀಪ್ರಿಯೋ ಬಹುಲಸದ್ಧನ ಕೀರ್ತಿಯುತೋ ನರಃ ।**
**ಜನನಿಪಾಲನಕರ್ಮರತಃ ಸದಾ ಭವಪತಿರ್ದಶಮಸ್ಥಲಗೋ ಯದಾ ॥**

ಲಾಭೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ತನ್ನ ತಂದೆಯ ವಿರೋಧಿಯು, ತಾಯಿಗೆ ಪ್ರಿಯನಾದವನು, ಹೇರಳಧನ ಮತ್ತು ಕೀರ್ತಿಯುತನು ಆಗುತ್ತಾನೆ ಮತ್ತು ಯಾವಾಗಲೂ ತಾಯಿಯ ಪಾಲನಾ ಕರ್ಮ ನಿರತನು ಆಗುತ್ತಾನೆ.

ಅನುಭವದಲ್ಲಿ - ಲಾಭೇಶನು ದಶಮಭಾವದಲ್ಲಿ ಇದ್ದಾಗ ಜಾತಕನು, ಗುಣವಂತನು ಬುದ್ಧಿಶಾಲಿಯು, ನ್ಯಾಯವಂತನು, ಸತ್ಕರ್ಮಮಾಡುವವನು, ದೀರ್ಘಾಯುವು, ತಾಯಿಗೆ ಪ್ರಿಯನಾದವನು ಆಗುತ್ತಾನೆ, ಇವರು ವ್ಯಾಪರ-ವ್ಯವಹಾರ ಅಥವಾ ಉದ್ಯೋಗದಲ್ಲಿ ಸ್ವತಹ ಬುದ್ಧಿವಂತಿಕೆಯಿಂದ ದುಡಿದು ಯಶಸ್ವಿಯಾಗಿ ಧನ-ಸಂಪತ್ತನ್ನುಗಳಿಸುತ್ತಾರೆ ಹಾಗೂ ಕೀರ್ತಿವಂತರು ಆಗುತ್ತಾರೆ.

## ೧೩೧. ಏಕಾದಶಭಾವಗತ ಏಕಾದಶೇಶಫಲ

**ಪರಾಶರಹೋರಾ**

> **ಲಾಭೇಶೇ ಲಾಭಭಾವಸ್ಥೇ ಲಾಭಃ ಸರ್ವೇಷು ಕರ್ಮಸು ।**
> **ಪಾಂಡಿತ್ಯಂ ಚ ಸುಖಂ ತಸ್ಯ ವರ್ಧತೇ ಚ ದಿನೇ ದಿನೇ ॥**

ಲಾಭೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ವ್ಯಾಪಾರ ವ್ಯವಹಾರಾದಿ ಕೈಕೊಂಡ ಸಕಲಕರ್ಮಗಳಲ್ಲಿ ಲಾಭಗಳಿಸುತ್ತಾನೆ, ದಿನದಿಂದ ದಿನ ಜಾತಕನ ವಿದ್ವತ್ತು ಮತ್ತು ಜ್ಞಾನ ಹಾಗೂ ಸುಖದ ಅಭಿವೃದ್ಧಿ ಆಗುತ್ತದೆ.

**ಮಾನಸಾಗರೀ**

> **ಲಾಭಾಧಿಪೋ ಲಾಭಗತಃ ಕರೋತಿ ದೀರ್ಘಾಯುಷಂ ಪುಷ್ಕಲ ಪುತ್ರಪೌತ್ರಮ್ ।**
> **ಸಕರ್ಮಕಂ ರೂಪವರಂ ಸುಶೀಲಂ ಜನಪ್ರಧಾನಂ ವಿಪುಲಂ ಮನೋಜ್ಞಮ್ ॥**

ಲಾಭೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುವು ಆಗುತ್ತಾನೆ, ಹೇರಳವಾದ ಮಕ್ಕಳು ಮತ್ತು ಮೊಮ್ಮಕ್ಕಳಿಂದ ಕೂಡಿದವನು, ಸತ್ಕರ್ಮ-ಸದಾಚಾರವಂತನು, ಸತ್ಕರ್ಮ ಮಾಡುವವನು, ರೂಪವಂತನು, ಸದ್ಗುಣವಂತನು, ಜನರಲ್ಲಿ ಮತ್ತು ವಿಪುಲವಾದ ಜ್ಞಾನಉಳ್ಳವನು ಆಗುತ್ತಾನೆ.

**ಯವನಜಾತಕ**

> **ಬಹುಲಜೀವಿತ ಲಾಭಗತಃ ಕರೋತಿ ದೀರ್ಘಾಯುಷಂ ಪುಷ್ಕಲ ಪುತ್ರಪೌತ್ರಮ್ ।**
> **ಅತಿಸುರೂಪ ಸುವಾಹನ ವಸ್ತ್ರಯುಕ್ತ ಗೃಹಗೇ ಭವಭಾವಪತೌ ನರಃ ॥**

ಲಾಭೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದೀರ್ಘಕಾಲ

ಜೀವಿಸುತ್ತಾನೆ, ಮುಗ್ಧಜನರೊಂದಿಗೆ ಇರುತ್ತಾನೆ, ಸುಂದರ ಹೃಷ್ಟ-ಪುಷ್ಟ ದೇಹದವನು, ಅತಿ ಸುರೂಪದವನು, ಸಂದರವಾಹನ ಮತ್ತು ವಸ್ತ್ರಯುತನು ಆಗುತ್ತಾನೆ.

ಅನುಭವದಲ್ಲಿ - ಲಾಭೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ದೀರ್ಘಾಯುಷ್ಯ ಉಳ್ಳವನು, ರೂಪವಂತನು, ಗುಣವಂತನು, ಸಂತಾನ-ಸಂಪತ್ತು ಉಳ್ಳವನು, ಸತ್ಕರ್ಮ-ಸದಾಚಾರವಂತನು ಆಗುತ್ತಾನೆ, ಉದ್ಯೋಗ, ವ್ಯಾಪಾರ-ವ್ಯವಹಾರಾದಿಯನ್ನು ಬುದ್ಧಿವಂತಿಕೆ ಮತ್ತು ಚತುರತೆಯಿಂದ ನಿರ್ವಹಿಸಿ ಹೇರಳ ಲಾಭಗಳಿಸಿ ಭೂಮಿ, ವಾಹನಾದಿ ಪಡೆದು, ಕೀರ್ತಿವಂತನು, ಸುಖವಂತನು ಆಗುತ್ತಾನೆ.

## ೧೩೨. ವ್ಯಯಭಾವಗತ ಏಕಾದಶೇಶಫಲ

**ಪರಾಶರಹೋರಾ**

> **ಲಾಭೇಶೇ ವ್ಯಯಭಾವಸ್ಥೇ ಸತ್ಕಾರ್ಯೇಷು ವ್ಯಯಃ ಸದಾ ।**
> **ಕಾಮುಕೋ ಬಹುಪತ್ನೀಕೋ ಮ್ಲೇಚ್ಛಸಂಸರ್ಗಕಾರಕಃ ॥**

ಲಾಭೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಯಾವಾಗಲೂ ಒಳ್ಳೆಯ ಕೆಲಸದಿಂದ ವ್ಯಯ ಸಂಭವಿಸುತ್ತದೆ, ಜಾತಕನು ಕಾಮುಕನು, ಬಹುಪತ್ನಿಯರು ಉಳ್ಳವನು ಮತ್ತು ಮ್ಲೇಂಛರ (ವಿದೇಶಿಯರ ಅಥವಾ ವಿಜಾತೀಯ) ಸಹವಾಸ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

> **ದ್ವಾದಶಗೇ ಲಾಭೇಶೇ ಸೂತ್ಪನ್ನಭುಕ್ ಸ್ಥಿರೋ ಭವತಿ ರೋಗೀ ।**
> **ಉತ್ಪಾತರತೋ ಮಾನೀ ದಾತಾ ಚ ಸುಖೀ ಸದಾ ಪುರುಷಃ ॥**

ಲಾಭೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಸ್ವತಹ ತಯಾರಿಸಲ್ಪಟ್ಟ ಅಥವಾ ಉತ್ಪಾದಿತ ವಸ್ತುಗಳನ್ನು ತಿನ್ನುತ್ತಾನೆ, ಸ್ಥಿರವಾಗಿರುವವನು, ರೋಗಿ, ಅನಾಹುತ ಅಥವಾ ದುರ್ಘಟನೆಯಲ್ಲಿ ಕೂಡಿರುತ್ತಾನೆ, ಪೂಜನೀಯನು, ದಾನವಂತನು ಹಾಗೂ ಯಾವಾಗಲೂ ಸುಖವಂತನು ಆಗುತ್ತಾನೆ.

**ಯವನಜಾತಕ**

> ಭವಪತೌ ವ್ಯಯಗೇ ಚ ಖಿಲೋ ನರಶ್ಚಪಲಜೀವಿತವಿತ್ತಯುತೋ ನರಃ ।
> ಭವತಿ ಮಾನಯುತೋ ಬಹುಕಷ್ಟದಃ ಸ್ಥಿತಧನೋ ಬಹುದುಷ್ಟಮತಿಃ ಖಿಲಃ ॥

ಲಾಭೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ದುಷ್ಟನು, ಚಪಲಜೀವಿತ, ಸಂಪತ್ತು ಉಳ್ಳವನು, ಮಾನವಂತನು, ಅತಿಕಷ್ಟ ಉಳ್ಳವನು, ಧನವಂತನು ಮತ್ತು ದುಷ್ಟ ಬುದ್ಧಿಯವನು ಆಗುತ್ತಾನೆ.

ಅನುಭವದಲ್ಲಿ - ಲಾಭೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಸತ್ಕರ್ಮ ಸದ್ವಿನಿಯೋಗಕ್ಕೆ ಧನ ವ್ಯಯ ಮಾಡುತ್ತಾನೆ, ಕಾಮುಕನು, ವಿಜಾತೀಯ ಅಥವಾ ನೀಚ ಜನರ ಸಹವಾಸ ಉಳ್ಳವನು, ಲಾಭೇಶನು ಪಾಪಗ್ರಹನಾದರೆ ಜಾತಕನು ದುರ್ಘಟನೆಯಲ್ಲಿ ಸಿಲುಕುತ್ತಾನೆ, ದುಷ್ಟಬುದ್ಧಿಯವನು ಆಗುತ್ತಾನೆ.

## ಲಗ್ನಾದಿಭಾವಗತ ವ್ಯಯೇಶಫಲ

## ೧೩೩. ಲಗ್ನಭಾವಗತ ವ್ಯಯೇಶಫಲ

**ಪರಾಶರಹೋರಾ**

> ವ್ಯಯೇಶೇ ಲಗ್ನಗೇ ಜಾತೋ ವ್ಯಯಶೀಲೋ ಜನೋ ಭವೇತ್ ।
> ದುರ್ಬಲಃ ಕಫರೋಗಿ ಚ ಧನವಿದ್ಯಾವಿವರ್ಜಿತಃ ॥

ವ್ಯಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ವ್ಯಯಶೀಲನು (ದುಂದುಗಾರನು) ಆಗುತ್ತಾನೆ, ಬಲಹೀನನು, ಕಫರೋಗಿಯು, ಧನ ಮತ್ತು ವಿದ್ಯೆ ಇಲ್ಲದವನು ಆಗುತ್ತಾನೆ.

**ಮಾನಸಾಗರೀ**

> ವ್ಯಯಪೇ ಲಗ್ನಗತೇ ವಿದೇಶಗಃ ಸುವಚನಃ ಸುರೂಪಶ್ಚ ।
> ಅಪಸಂಗವಾದದೋಷೀ ಭವತೀ ಕುಮಾರೋಽಥ ವಾಷಣ್ಢಃ ॥

ವ್ಯಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ವಿದೇಶಕ್ಕೆ ಹೋಗುತ್ತಾನೆ, ಒಳ್ಳೆಮಾತುಗಳನ್ನು ಆಡುತ್ತಾನೆ, ಸುಂದರವಾದ ರೂಪದವನು,

ಕೆಟ್ಟಜನರ ಸಹವಾಸದಿಂದ ಕಳಂಕಿತನು, ಅವಿವಾಹಿತನು ಅಥವಾ ನಪುಂಸಕನು ಆಗುತ್ತಾನೆ.

**ಯವನಜಾತಕ**

**ತನುಗತೇ ವ್ಯಯಭಾವಪತೌ ನರಃ ಸುವಚನಃ ಸ್ವಸರೂಪವಿದೇಶಗಃ ।**
**ಖಲಜನಾನುರತಶ್ಚ ವಿವಾದಯುಗ್ಯುವತಿಭಿಃ ಸಹಿತೋಽಪಿ ನಪುಂಸಕಃ ॥**

ವ್ಯಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ಶುಭಮಾತುಗಳನ್ನು ಆಡುವವನು, ರೂಪವಂತನು, ವಿದೇಶವಾಸ, ದುಷ್ಟ ಜನರ ಸಹವಾಸ, ವಿವಾದ ಮಾಡುವವನು. ಸ್ತ್ರೀಯರಿಂದ ಕೂಡಿದ್ದರೂ ನಪುಂಸಕನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ಲಗ್ನಭಾವದಲ್ಲಿ ಇದ್ದಾಗ ಜಾತಕನು ರೂಪವಂತನು, ದೇಶ-ವಿದೇಶ ಪ್ರಯಾಣ ಮಾಡುತ್ತಾನೆ, ನೀಚಜನರ ಸಹವಾಸದಿಂದ ಜಾತಕನ ಧನ-ಸಂಪತ್ತಿನ ಅವನತಿ ಆಗುತ್ತದೆ, ಅವಿವಾಹಿತನು ಅಥವಾ ದೀರ್ಘಕಾಲದ ನಂತರ ವಿವಾಹ ಆಗುತ್ತದೆ.

## ೧೩೪. ದ್ವಿತೀಯಭಾವಗತ ವ್ಯಯೇಶಫಲ

**ಪರಾಶರಹೋರಾ**

**ವ್ಯಯೇಶೇ ಧನಭಾವಸ್ಥೇ ಶುಭಕಾರ್ಯೇ ವ್ಯಯಃ ಸದಾ ।**
**ಧಾರ್ಮಿಕಃ ಪ್ರಿಯವಾದೀ ಚ ಗುಣಸೌಖ್ಯಸಮನ್ವಿತಃ ॥**

ವ್ಯಯೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ ಶುಭಕಾರ್ಯ ಮಾಡುವುದರಿಂದ ಖರ್ಚು ಆಗುತ್ತದೆ, ಧಾರ್ಮಿಕನು, ಪ್ರಿಯವಾದ ಮಾತುಗಳನ್ನು ಆಡುವವನು, ಗುಣ ಮತ್ತು ಸುಖದಿಂದ ಕೂಡಿದವನು ಆಗುತ್ತಾನೆ.

**ಮಾನಸಾಗರೀ**

**ದ್ವಾದಶಪೇ ವಿತ್ತಗತೇ ಕೃಪಣಃ ಕಟುವಾಗ್ವಿನಷ್ಟಲಾಭಲಯಃ ।**
**ಸೌಮ್ಯೇತು ನಿಧನಂ ಗಚ್ಛತಿ ನೃಪತಸ್ಕರವಹ್ನಿತೋಽಭಿಭಯಮ್ ॥**

ವ್ಯಯೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನು ಕೃಪಣನು, ಕಟುವಾಗಿ ತೀಕ್ಷ್ಣವಾದ ಅಥವಾ ನಿಂದಿತ ಮಾತುಗಳನ್ನು ಆಡುತ್ತಾನೆ,

ನೃಷ್ಟದಿಂದಲೂ ಲಾಭಗಳಿಸುವವನು ಆಗುತ್ತಾನೆ. ವ್ಯಯಾಧಿಪತಿಯು ಶುಭಗ್ರಹನಾದರೆ ಜಾತಕನಿಗೆ ರಾಜನಿಂದ, ಕಳ್ಳರಿಂದ ಅಥವಾ ಬೆಂಕಿಯಿಂದ ಹಾನಿ ಅಥವಾ ಮರಣ ಭಯ ಉಂಟಾಗುತ್ತದೆ.

**ಯವನಜಾತಕ**

> **ಕೃಪಣತಾ ಕಟುವಾಗ್ಧನಭಾವಗೇ ವ್ಯಯಪತೌ ವಿಕಲಶ್ಚ ವಿನಷ್ಟಧೀः ।**
> **ಧರಣಿಜೇ ವಿಧನಂ ನೃಪತಸ್ಕರಾದಪಿ ಚ ಪಾಪಕರಶ್ಚ ಚತುಷ್ಪದೇ ॥**

ವ್ಯಯೇಶನು ದ್ವಿತೀಯಭಾವದಲ್ಲಿ ಇದ್ದಾಗ ಜಾತಕನಲ್ಲಿ ಕೃಪಣತೆ ಇರುತ್ತದೆ, ತೀಕ್ಷ್ಣವಾದ ಮಾತುಗಳನ್ನು ಆಡುತ್ತಾನೆ, ಅಂಗವಿಕಲತೆ, ಬುದ್ಧಿಯನ್ನು ಕಳಕೊಂಡವನು ಆಗುತ್ತಾನೆ, ವ್ಯಯಾಧಿಪತಿ ಕುಜನು ದ್ವಿತೀಯಭಾವದಲ್ಲಿ ಇದ್ದಾಗ ರಾಜನಿಂದ ಅಥವಾ ಕಳ್ಳನಿಂದ ಧನವನ್ನು ಕಳಕೊಳ್ಳುತ್ತಾನೆ, ಚತುಷ್ಪಾದ ಪ್ರಾಣಿಗಳಿಗೆ ಪಾಪ (ಹಾನಿ-ವಧ) ಮಾಡುತ್ತಾನೆ.

ಅನುಭವದಲ್ಲಿ - ವ್ಯಯೇಶನು ಧನಸ್ಥಾನದಲ್ಲಿ ಇದ್ದಾಗ ಜಾತಕನ ಮನೆಯಲ್ಲಿ ಮತ್ತು ಕುಟುಂಬದಲ್ಲಿ ಆಗ್ಗಾಗ್ಗೆ ಶುಭಕಾರ್ಯ ಜರುಗುವುದರಿಂದ ಅಧಿಕ ಖರ್ಚು ಸಂಭವಿಸಿ ಜಾತಕನು ಆರ್ಥಿಕ ಸಂಕಷ್ಟಕ್ಕೀಡಾಗುತ್ತಾನೆ, ವ್ಯಯೇಶನು ಪಾಪಗ್ರಹನಾದರೆ ಜಾತಕನಲ್ಲಿ ಕೃಪಣತೆ, ಮಾತಿನಲ್ಲಿ ತೀಕ್ಷ್ಣತೆ. ಕಳ್ಳರಿಂದ ಧನವು ಅಪಹರಣ ಆಗುತ್ತದೆ.

## ೧೩೫. ತೃತೀಯಭಾವಗತ ವ್ಯಯೇಶಫಲ

**ಪರಾಶರಹೋರಾ**

> **ವ್ಯಯೇಶೇ ಸಹಜೇ ಜಾತೋ ಭ್ರಾತೃಸೌಖ್ಯವಿವರ್ಜಿತः ।**
> **ಭವೇದನ್ಯ ಜನದ್ವೇಷೀ ಸ್ವಶರೀರಸ್ಯ ಪೋಷಕः ॥**

ವ್ಯಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರ ಸುಖವನ್ನು ಕಳಕೊಂಡವನು, ಅನ್ಯಜನರನ್ನು ದ್ವೇಷಿಸುವವನು ಮತ್ತು ತನ್ನ ದೇಹವನ್ನು ಪೋಷಿಸುವವನು ಆಗುತ್ತಾನೆ.

ಮಾನಸಾಗರೀ

**ಸಹಜಗತೇ ದ್ವಾದಶಪೇ ಕ್ರೂರೇ ಗತಬಾಂಧವಃ ಶುಭೇ ಚ ಧನೀ ।**
**ತನುಸೋದರಃ ಸುಕೃಪಣೇ ಬಂಧುಷು ದೂರೇ ಸದಾ ವಸತಿ ॥**

ವ್ಯಯೇಶನು ಕ್ರೂರಗ್ರಹನಾಗಿ ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರು ಇಲ್ಲದವನು, ವ್ಯಯಾಧಿಪತಿಯು ಶುಭಗ್ರಹನಾಗಿದ್ದರೆ ಅಲ್ಪ ಸಹೋದರರು ಉಳ್ಳವನು, ಅತಿಕೃಪಣನು ಹಾಗೂ ಬಂಧುಗಳಿಂದ ಯಾವಾಗಲೂ ದೂರ ಇರುತ್ತಾನೆ.

ಯವನಜಾತಕ

**ವಿಗತಬಂಧುಜನಃ ಖಲಪೂಜಿತೋ ವ್ಯಯಪತೌ ಸಹಜಸ್ಥಲಗೇ ಸತಿ ।**
**ಧನಯುತೋಽಪಿ ಭವೇನ್ಮನುಜಃ ಕ್ಷಿತೌ ಕೃಪಣ ಬಂಧು ಜನಾನುರತಃ ಸದಾ ॥**

ವ್ಯಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಬಂಧು ಜನರನ್ನು ಕಳಕೊಂಡವನು, ದುಷ್ಟಜನರಿಂದ ಸನ್ಮಾನಿತನು, ಧನಉಳ್ಳವನಾದರೂ ಕೃಪಣನು ಮತ್ತು ಯಾವಾಗಲೂ ಬಂಧು ಜನರಲ್ಲಿ ಅನುರಕ್ತನು ಆಗಿರುತ್ತಾನೆ.

ಅನುಭವದಲ್ಲಿ - ವ್ಯಯೇಶನು ತೃತೀಯಭಾವದಲ್ಲಿ ಇದ್ದಾಗ ಜಾತಕನು ಸಹೋದರರ ಸುಖವನ್ನು ಕಳಕೊಂಡವನು, ವ್ಯಯೇಶನು ಕ್ರೂರಗ್ರಹನಾದರೆ ಸಹೋದರರು ಇಲ್ಲದವನು, ಕೃಪಣನು, ವ್ಯಾಪಾರ-ವ್ಯವಹಾರ ಸಹೋದರರೊಂದಿಗೆ ಕೂಡಿ ಮಾಡಿದರೆ ನಷ್ಟ ಸಂಭವಿಸಬಹುದು.

## ೧೩೬. ಚತುರ್ಥಭಾವಗತ ವ್ಯಯೇಶಫಲ

ಪರಾಶರಹೋರಾ

**ವ್ಯಯೇಶೇ ಸುಖಭಾವಸ್ಥೇ ಮಾತುಃ ಸುಖವಿವರ್ಜಿತಃ ।**
**ಭೂಮಿಯಾನ ಗೃಹಾದೀನಾಂ ಹಾನಿಸ್ತಸ್ಯ ದಿನೇ ದಿನೇ ॥**

ವ್ಯಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮಾತೃ ಸುಖವನ್ನು ಕಳಕೊಂಡವನು ಆಗಿರುತ್ತಾನೆ. ಇವನ ಭೂಮಿ, ವಾಹನ ಮತ್ತು ಮನೆ ಇತ್ಯಾದಿಗಳಿಗೆ ದಿನದಿಂದ ದಿನ ಹಾನಿಯಾಗುತ್ತದೆ.

ಮಾನಸಾಗರೀ

ತುರ್ಯಗತೇ ವ್ಯಯನಾಥೇ ಕೃಪಣೋ ರೋಗಿ ಸುಕರ್ಮಾ ಚ ।
ಮೃತಿಮಾಪ್ನೋತಿ ಸುತೇಭ್ಯಃ ಸತತಂ ಮನುಜೋ ಮಹಾದುಃಖೀ ॥

ವ್ಯಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಕೃಪಣನು, ರೋಗಿಯು, ಸತ್ಕರ್ಮ ಮಾಡುತ್ತಾನೆ, ಯಾವಾಗಲೂ ಅತಿದುಃಖಿತನು ಆಗುತ್ತಾನೆ, ತನ್ನ ಪುತ್ರನಿಂದ ಅವನ ಮರಣ ಆಗುತ್ತದೆ.

ಯವನಜಾತಕ

ಕಠಿನಕರ್ಮಯುತಃ ಶುಭಕರ್ಮಕೃದ್ವ್ಯಯಪತೌ ಸುಖಿಗೇ ಚ ಸುಖಾನ್ವಿತಃ ।
ಸುತಜನಾನ್ಮರಣಂ ಚ ದೃಢವ್ರತೀ ದಿವಿಚರೇ ಸ ಭವೇದುಪಕಾರಕಃ ॥

ವ್ಯಯೇಶನು ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಕಠಿಣವಾದ ಕೆಲಸ ಹಾಗೂ ಶುಭಕರ್ಮ ಮಾಡುತ್ತಾನೆ, ಸುಖವಂತನು ಆಗುತ್ತಾನೆ, ಪುತ್ರರಿಂದ ಮರಣ, ನಿಯಮವನ್ನು ದೃಢತೆಯಿಂದ ಪಾಲನೆ ಮಾಡುತ್ತಾನೆ ಮತ್ತು ಉಪಕಾರ ಮಾಡುವವನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ಕ್ರೂರಗ್ರಹನಾಗಿ ಚತುರ್ಥಭಾವದಲ್ಲಿ ಇದ್ದಾಗ ಜಾತಕನು ಮಾತೃಸುಖ ಇಲ್ಲದವನು, ಭೂಮಿ, ಮನೆ ಮತ್ತು ವಾಹನ ಇವುಗಳಿಗೆ ಹಾನಿ ಅಥವಾ ಇವುಗಳಿಂದ ನಷ್ಟಸಂಭವಿಸುತ್ತದೆ. ವ್ಯಯೇಶನು ಶುಭಗ್ರಹನಾದರೆ ಜಾತಕನು ತೀರ್ಥಯಾತ್ರೆ ಮಾಡುತ್ತಾನೆ, ದೇಶ-ವಿದೇಶ ಪ್ರಯಾಣ ಮಾಡುತ್ತಾನೆ, ಮತ್ತು ಸುಖವಂತನು ಆಗುತ್ತಾನೆ.

## ೧೩೭. ಪಂಚಮಭಾವಗತ ವ್ಯಯೇಶಫಲ

ಪರಾಶರಹೋರಾ

ವ್ಯಯೇಶೇ ಸುತಭಾವಸ್ಥೇ ಸುತವಿದ್ಯಾವಿವರ್ಜಿತಃ ।
ಪುತ್ರಾರ್ಥೇ ಚ ವ್ಯಯಸ್ತಸ್ಯ ತೀರ್ಥಾಟನಪರೋ ನರಃ ॥

ವ್ಯಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಪುತ್ರರು ಮತ್ತು ವಿದ್ಯೆಯನ್ನು ಬಿಟ್ಟವನು, ಪುತ್ರಸಂತಾನ ಪ್ರಾಪ್ತಿಗೋಸ್ಕರ ಹಾಗೂ ತೀರ್ಥಯಾತ್ರೆ ಮಾಡಿ ಧನವ್ಯಯ ಆಗುತ್ತದೆ.

ಮಾನಸಾಗರೀ

ದ್ವಾದಶಪತೌ ಸುತಸ್ಥೇ ಕ್ರೂರೇ ಸಂತತಿವಿವರ್ಜಿತಃ ಶುಭೇ ಸಸುತಃ ।
ಜನನಕಕಮಲಾವಿಲಾಸೀ ಸಮರ್ಥತಾವಿರಹಿತಃ ಪುರುಷಃ ॥

ವ್ಯಯೇಶನು ಕ್ರೂರಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನು ಸಂತಾನದಿಂದ ಬಿಡಲ್ಪಟ್ಟವನು ಆಗುತ್ತಾನೆ, ವ್ಯಯೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನು ಸಂತಾನಯುಕ್ತನು ಆಗುತ್ತಾನೆ, ಪಿತ್ರಾರ್ಜಿತಧನದ ಉಪಭೋಗ ಮಾಡುತ್ತಾನೆ, ಮತ್ತು ಕಾರ್ಯ ಸಾಧಿಸುವ ದಕ್ಷತೆ ರಹಿತ ಪುರುಷನು ಆಗುತ್ತಾನೆ.

ಯವನಜಾತಕ

ತನಯಗೇಽಪಿ ಖಲಸ್ತನಯೋ ಭವೇದ್ವ್ಯಯಪತೌ ತನುತೇಽಥ ಖಲಾನ್ವಿತೇ ।
ಶುಭಖಗೇತಿಶುಭಂ ಪಿತೃಕಂ ಧನಂ ಭವತಿ ಚಾಪಿ ಸಮರ್ಥತಯಾಽನ್ವಿತಃ ॥

ವ್ಯಯೇಶನು ಕ್ರೂರಗ್ರಹನಾಗಿ ಪಂಚಮಭಾವದಲ್ಲಿ ಇದ್ದಾಗ ಜಾತಕನ ಪುತ್ರನು ದುಷ್ಟನು ಆಗುತ್ತಾನೆ, ವ್ಯಯೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದರೆ ಜಾತಕನಿಗೆ ಸಮರ್ಥನಾದ ಉತ್ತಮ ಪುತ್ರನು ಜನಿಸುತ್ತಾನೆ ಹಾಗೂ ತಂದೆಯಧನ ಪಡೆಯುತ್ತಾನೆ.

ಅನುಭವದಲ್ಲಿ - ವ್ಯಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನಿಗೆ ಸಂತಾನ ಚಿಂತೆ ಇರುತ್ತದೆ, ವ್ಯಯೇಶನು ಕ್ರೂರಗ್ರಹನಾದರೆ, ಸಂತಾನ ಪ್ರಾಪ್ತಿಗೋಸ್ಕರ ಚಿಕಿತ್ಸೆ ಹಾಗೂ ಸೂಕ್ತಪರಿಹಾರ ಮಾಡಬೇಕಾಗುತ್ತದೆ, ವ್ಯಯೇಶನು ಶುಭಗ್ರಹನಾಗಿ ಪಂಚಮಭಾವದಲ್ಲಿ ಇದ್ದರೆ ಜಾತಕನು ಸಂತಾನಯುತನು ಆಗುತ್ತಾನೆ, ವ್ಯಯೇಶನು ಪಂಚಮಭಾವದಲ್ಲಿ ಇದ್ದಾಗ ಜಾತಕನು ಗಹನವಾಗಿ ಚಿಂತನೆಯಿಂದ ಕಾರ್ಯಸಾಧನೆ ಮಾಡಿ ಉದ್ಯೋಗ, ವ್ಯಾಪಾರ ವ್ಯವಹಾರದಲ್ಲಿ ಅಭಿವೃದ್ಧಿ ಹೊಂದುತ್ತಾನೆ.

## ೧೩೮. ಷಷ್ಠಭಾವಗತ ವ್ಯಯೇಶಫಲ

ಪರಾಶರಹೋರಾ

ವ್ಯಯೇಶೇ ರಿಪುಭಾವಸ್ಥೇ ಜಾತಃ ಸ್ವಜನವೈರಕೃತ್ ।
ಕ್ರೋಧೀ ಪಾಪೀ ಚ ದುಃಖೀ ಚ ಪರಜಾಯಾರತೋ ನರಃ ॥

ವ್ಯಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನಿಗೆ ಸ್ವಜನರೊಂದಿಗೆ ವೈರತ್ವ ಆಗುತ್ತದೆ, ಜಾತಕನು ಕೋಪಿಷ್ಠನು, ಪಾಪಿಯು, ದುಃಖಿತನು ಹಾಗೂ ಪರಸ್ತ್ರೀರತನು ಆಗುತ್ತಾನೆ.

**ಮಾನಸಾಗರೀ**

> **ಷಷ್ಠಗತೇ ವ್ಯಯನಾಥೇ ಕ್ರೂರೇ ಕೃಪಣೋಽಕ್ಷಿದೂಷಣಃ ಪುರುಷಃ ।**
> **ಲಭತೇ ಮೃತಿಂ ನಿತಾಂತ ಭೃಗುತನಯೇ ನೇತ್ರಹೀನಃ ಸ್ಯಾತ್ ॥**

ವ್ಯಯೇಶನು ಕ್ರೂರಗ್ರಹನಾಗಿ ಷಷ್ಠಭಾವದಲ್ಲಿ ಇದ್ದಾಗ ಜಾತಕನು ಕೃಪಣನು, ಕಣ್ಣಿನ ದೋಷ ಉಳ್ಳವನು, ಅಥವಾ ಮರಣ ಹೊಂದುತ್ತಾನೆ, ಶುಕ್ರನು ವ್ಯಯೇಶನಾಗಿದ್ದರೆ ನೇತ್ರಹೀನನು ಆಗುತ್ತಾನೆ.

**ಯವನಜಾತಕ**

> **ವ್ಯಯಪತೌ ರಿಪುಗೇ ಕೃಪಣಃ ಖಲಃ ಖಲಖಗೇ ನಿಯತಂ ನಯನಾಮಯಮ್ ।**
> **ಪರಗೃಹಾಶ್ರಯಿಣೋ ಭೃಗುಪುತ್ರತೋ ಗತಸುತಃ ಶುಭಬುದ್ಧಿಯುತೋ ಭವೇತ್ ॥**

ವ್ಯಯೇಶನು ಷಷ್ಠಭಾವದಲ್ಲಿ ಇದ್ದಾಗ ಜಾತಕನು ಕೃಪಣನು ಮತ್ತು ದುಷ್ಟನು ಆಗುತ್ತಾನೆ, ವ್ಯಯೇಶನು ಕ್ರೂರಗ್ರಹನಾದರೆ ಜಾತಕನಿಗೆ ಕಣ್ಣಿನರೋಗ ಆಗುತ್ತದೆ, ಅನ್ಯ ಜನರ ಮನೆಯಲ್ಲಿ ವಾಸಿಸುತ್ತಾನೆ, ವ್ಯಯೇಶನು ಶುಕ್ರನಾದರೆ ಜಾತಕನಿಗೆ ಸಂತಾನ ನಷ್ಟ ಆಗುತ್ತದೆ, ಜಾತಕನು ಬುದ್ಧಿವಂತನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ಷಷ್ಠಭಾವದಲ್ಲಿ ಇದ್ದಾಗ, ಜಾತಕನು ಕೋಪಿಷ್ಠನು, ಕೃಪಣನು ಕಣ್ಣಿನದೋಷ ಇರುತ್ತದೆ, ಜಾತಕನು ಚತುರನು ಮತ್ತು ಸ್ವಾರ್ಥಸಾಧಕನು ಆಗುತ್ತಾನೆ, ವ್ಯಯೇಶನು ಪಾಪಗ್ರಹನಾದರೆ ಜಾತಕನು ದುಷ್ಟನು ಮತ್ತು ಪಾಪಕರ್ಮ ಮಾಡುತ್ತಾನೆ.

## ೧೩೯. ಸಪ್ತಮಭಾವಗತ ವ್ಯಯೇಶಫಲ

**ಪರಾಶರಹೋರಾ**

> **ವ್ಯಯೇಶೇ ದಾರಭಾವಸ್ಥೇ ವ್ಯಯೋದಾರ್ಯಕತಃ ಸದಾ ।**
> **ತಸ್ಯಭಾರ್ಯಾಸುಖಂ ನೈವ ಬಲ ವಿದ್ಯಾವಿವರ್ಜಿತಃ ॥**

ವ್ಯಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ

ತನ್ನ ಪತ್ನಿಗೋಸ್ಕರ ಖರ್ಚುಮಾಡುತ್ತಾನೆ, ಆತನಿಗೆ ಪತ್ನಿಯಿಂದ ಸುಖ ಲಭಿಸುವುದಿಲ್ಲ ಹಾಗೂ ಬಲ ಮತ್ತು ವಿದ್ಯೆ ತ್ಯಜಿಸಿದವನು ಆಗುತ್ತಾನೆ.

**ಮಾನಸಾಗರೀ**

**ದ್ವಾದಶಪೇ ಸಪ್ತಮಗೇ ದುಷ್ಟೋ ದುಶ್ಚರಿತಭತ್ಸ್ಯಟುವಚನಃ ॥**
**ಕ್ರೂರೇ ಸ್ವಸ್ತ್ರೀತಃ ಸ್ಯಾತ್ ಸೌಮ್ಯೇ ಕ್ಷಯಮೇತಿ ಗಣಿಕಾತಃ ॥**

ವ್ಯಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ದುಷ್ಟನು, ಚರಿತ್ರ ಹೀನನು, ವಾಕ್‌ಚಾತುರ್ಯ ಉಳ್ಳವನು ಆಗುತ್ತಾನೆ, ವ್ಯಯಾಧಿಪತಿಯು ಕ್ರೂರಗ್ರಹನಾದರೆ ಜಾತಕನು ತನ್ನ ಪತ್ನಿಯಿಂದ ಮತ್ತು ಶುಭಗ್ರಹನಾದರೆ ವೇಶ್ಯೆಯಿಂದ ಮರಣ ಹೊಂದುತ್ತಾನೆ.

**ಯವನಜಾತಕ**

**ಭವತಿ ದುಷ್ಟಮತಿಶ್ಚ ಗೃಹಾಗ್ರಣೀಃ ಕಪಟದುಷ್ಟ ದುರಾಚರಣಃ ಖಲಃ ।**
**ಖಲಖಗೇ ಮದಗೇ ವ್ಯಯಭಾವಪೇ ಖಲಖಗೇ ಗಣಿಕಾಧನವಾನ್ಕುಧೀಃ ॥**

ವ್ಯಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ದುಷ್ಟಬುದ್ಧಿಯವನು, ತನ್ನ ಮನೆಯಲ್ಲಿ ಪ್ರಧಾನನು ಆಗಿರುತ್ತಾನೆ, ಹಾಗೂ ಕಪಟಿಯು, ಮತ್ತು ದುರಾಚಾರವಂತನು ಆಗಿರುತ್ತಾನೆ, ಕ್ರೂರಗ್ರಹನು ವ್ಯಯೇಶನಾಗಿ ಸಪ್ತಮಭಾವದಲ್ಲಿ ಇದ್ದಾಗ ಜಾತಕನಿಗೆ ವೇಶ್ಯೆಯಿಂದ ಧನಲಭಿಸುತ್ತದೆ ಮತ್ತು ಕ್ರೂರಬುದ್ಧಿಯವನು ಆಗಿರುತ್ತಾನೆ.

ಅನುಭವದಲ್ಲಿ - ವ್ಯಯೇಶನು ಸಪ್ತಮಭಾವದಲ್ಲಿ ಇದ್ದಾಗ ಜಾತಕನು ಪತ್ನಿಗೋಸ್ಕರ ಖರ್ಚು ಮಾಡುತ್ತಾನೆ, ವ್ಯಯೇಶನು ಕ್ರೂರ ಗ್ರಹನಾದರೆ ಜಾತಕನು ದುಷ್ಟ ಸ್ವಭಾವದವನು, ದುರಾಚಾರವಂತನು ಆಗಿರುತ್ತಾನೆ ಮತ್ತು ದಾಂಪತ್ಯಜೀವನ ಸುಖಮಯವಲ್ಲ. ಪಾಲು ವ್ಯಾಪಾರದಲ್ಲಿ ನಷ್ಟ ಹೊಂದುತ್ತಾನೆ.

## ೧೪೦. ಅಷ್ಟಮಭಾವಗತ ವ್ಯಯೇಶಫಲ

**ಪರಾಶರಹೋರಾ**

**ವ್ಯಯೇಶೇ ಮೃತುಭಾವಸ್ಥೇ ಜಾತೋ ಲಾಭಾನ್ವಿತಃ ಸದಾ ।**
**ಪ್ರಿಯವಾಂಜ್ ಮಧ್ಯಮಾಯುಶ್ಚ ಸಂಪೂರ್ಣಗುಣಸಂಯುತಃ ॥**

ವ್ಯಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಯಾವಾಗಲೂ ಲಾಭಗಳಿಸುತ್ತಾನೆ, ಪ್ರಿಯವಾದ ಮಾತುಗಳು, ಮಧ್ಯಮ ಆಯುರ್ದಾಯ ಮತ್ತು ಪೂರ್ಣಸದ್ಗುಣದಿಂದ ಕೂಡಿದವನು ಆಗುತ್ತಾನೆ.

**ಮಾನಸಾಗರೀ**

> ನಿಧನಗತೇ ವ್ಯಯನಾಥೇಽಷ್ಟಕಪಾಲೀ ಕಾರ್ಯಸಾಧನೈ ರಹಿತಃ ।
> ದ್ರೋಹಮತಿಃ ಸೌಮ್ಯಖಗೇ ಧನಸಂಗ್ರಹಪರೋ ನರೋ ಭವತಿ ॥

ವ್ಯಯೇಶನು ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಷ್ಟಕಪಾಲೀ ಕಾರ್ಯಸಾಧನೆ ಮಾಡದವನು, ದ್ರೋಹ ಬುದ್ಧಿ ಉಳ್ಳವನು ಆಗುತ್ತಾನೆ. ವ್ಯಯೇಶನು ಶುಭಗ್ರಹನಾದರೆ ಜಾತಕನು ಧನ-ಸಂಗ್ರಹ ನಿರತನು ಆಗುತ್ತಾನೆ.

**ಯವನಜಾತಕ**

> ನಿಧನಪೇ ವ್ಯಯಪೇಷ್ಟಕಪಾಲಕಃ ಸಕಲಕಾರ್ಯ ವಿವೇಕವಿವರ್ಜಿತಃ ।
> ಭವತಿ ನಿಂದಿತ ಏವ ತಥಾಶುಭೇ ದಿವಿಚರೇ ಧನಸಂಗ್ರಹತತ್ಪರಃ ॥

ವ್ಯಯೇಶನು ಕ್ರೂರಗ್ರಹನಾಗಿ ಅಷ್ಟಮಭಾವದಲ್ಲಿ ಇದ್ದಾಗ ಜಾತಕನು ಅಷ್ಟಕಪಾಲನು ಹಾಗೂ ಎಲ್ಲ ಕಾರ್ಯ ನಿರ್ವಹಿಸುವಾಗ ವಿವೇಚನೆ ಇಲ್ಲದವನು ಆಗುತ್ತಾನೆ, ವ್ಯಯೇಶನು ಕ್ರೂರಗ್ರಹನಾದರೆ ಜಾತಕನು ಧನಸಂಗ್ರಹದಲ್ಲಿ ತತ್ಪರನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ಅಷ್ಟಮಭಾವದಲ್ಲಿ ಇದ್ದಾಗ ವಿಪರೀತ ರಾಜಯೋಗ ಆಗುತ್ತದೆ, ಜಾತಕನು ಚತುರತೆ ಅಥವಾ ಕುತಂತ್ರದಿಂದ ಕಾರ್ಯಸಾಧನೆ ಮಾಡುತ್ತಾನೆ, ವ್ಯಯೇಶನು ಶುಭಗ್ರಹನಾದರೆ ಧನ-ಸಂಗ್ರಹ ಆಗುತ್ತದೆ.

## ೧೪೧. ನವಮಭಾವಗತ ವ್ಯಯೇಶಫಲ

**ಪರಾಶರಹೋರಾ**

> ವ್ಯಯೇಶೇ ಭಾಗ್ಯಭಾವಸ್ಥೇ ಗುರುದ್ವೇಷೀ ಭವೇನ್ನರಃ ।
> ಮಿತ್ರೈರಪಿ ಭವೇದ್ವೈರಂ ಸ್ವಾರ್ಥಸಾಧನತತ್ಪರಃ ॥

ವ್ಯಯೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಗುರುವನ್ನು ದ್ವೇಷಿಸುವವನು ಆಗುತ್ತಾನೆ, ಮಿತ್ರರೊಂದಿಗೆ ವೈರತ್ವ ಆಗುತ್ತದೆ ಮತ್ತು ಸ್ವಾರ್ಥಸಾಧನೆಯಲ್ಲಿ ನಿರತನು ಆಗಿರುತ್ತಾನೆ.

**ಮಾನಸಾಗರೀ**

**ಸುಕೃತಗತೇ ವ್ಯಯನಾಥೇ ತೀರ್ಥಾಲೋಕಾಟನಂ ವೃತ್ತಿಃ ।**
**ಕ್ರೂರೇ ಖಗೇ ಚ ಪಾಪೀ ನಿರರ್ಥಕಂ ಯಾತಿ ತದ್‌ದ್ರವ್ಯಮ್ ॥**

ವ್ಯಯೇಶನು ನವಮಭಾವದಲ್ಲಿ ಇದ್ದಾಗ ಜಾತಕನು ತೀರ್ಥಕ್ಷೇತ್ರಗಳ ಸಂಚಾರದಿಂದ ವೃತ್ತಿನಿರ್ವಹಣೆ ಮಾಡುತ್ತಾನೆ, ವ್ಯಯಾಧಿಪತಿಯು ಕ್ರೂರಗ್ರಹನಾದರೆ ಜಾತಕನು ಪಾಪಿಯು, ಅನಾವಶ್ಯಕ ಧನವ್ಯಯ ಮಾಡುವವನು ಆಗುತ್ತಾನೆ.

**ಯವನಜಾತಕ**

**ಸುಕೃತಕೃದ್ವ್ಯಯಪೇ ನವಮಾಶ್ರಿತೇ ವೃಷಭಗೋಮಹಿಷೀದ್ರವಿಣಃ ಸುಧೀಃ ।**
**ಭವತಿ ತೀರ್ಥವಿಚಕ್ಷಣಪುಣ್ಯಯುಕ್ಖಲಖಗೇಽಪಿ ಚ ಪಾಪರತೋ ನರಃ ॥**

ವ್ಯಯೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಎತ್ತು, ದನ, ಎಮ್ಮೆ ಮತ್ತು ಧನದಿಂದ ಕೂಡಿದವನು, ಉತ್ತಮ ಬುದ್ಧಿವಂತನು, ತೀರ್ಥಕ್ಷೇತ್ರ ಸಂದರ್ಶಿಸಿ ಪುಣ್ಯವಂತನು ಆಗುತ್ತಾನೆ, ವ್ಯಯೇಶನು ಕ್ರೂರಗ್ರಹನಾದರೆ ಪಾಪಕರ್ಮನಿರತನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ನವಮಭಾವದಲ್ಲಿ ಇದ್ದಾಗ ಜಾತಕನು ಸತ್ಕರ್ಮ-ಸದಾಚಾರವಂತನು, ತೀರ್ಥಕ್ಷೇತ್ರಗಳ ಸಂದರ್ಶನ ಮಾಡುತ್ತಾನೆ, ಪುಣ್ಯವಂತನು ಆಗುತ್ತಾನೆ, ವ್ಯಯೇಶನು ಕ್ರೂರಗ್ರಹನಾದರೆ ಜಾತಕನಿಗೆ ಗುರು-ಹಿರಿಯರೊಂದಿಗೆ ಕಲಹ, ಸ್ವಾರ್ಥ-ಸಾಧನೆ, ಅನಾವಶ್ಯಕ ಧನವ್ಯಯ ಮತ್ತು ಪಶುಪಾಲನೆ ಮಾಡುತ್ತಾನೆ.

# ೧೪೨. ದಶಮಭಾವಗತ ವ್ಯಯೇಶಫಲ

**ಪರಾಶರಹೋರಾ**

**ವ್ಯಯೇಶೇ ರಾಜ್ಯಭಾವಸ್ಥೇ ವ್ಯಯೋ ರಾಜಕುಲಾದ್ ಭವೇತ್ ।**
**ಪಿತೃತೋಽಪಿ ಸುಖಂ ತಸ್ಯ ಸ್ವಲ್ಪಮೇವ ಹಿ ಜಾಯತೇ ॥**

ವ್ಯಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ರಾಜಕುಲದವರೊಂದಿಗೆ ಖರ್ಚು ಪಡೆಯುತ್ತಾನೆ, ತಂದೆಯಿಂದ ಸ್ವಲ್ಪ ಸುಖ ಲಭಿಸುತ್ತದೆ.

**ಮಾನಸಾಗರೀ**

**ವ್ಯಯಪೇ ಗಗನಗೃಹಸ್ಥೇ ಪರರಮಣೀಪರಾಙ್ಮುಖಃ ಪವಿತ್ರಾಙ್ಗಃ ।**
**ಸುತಧನಸಂಗ್ರಹನಿರತೋ ದುರ್ವಚನಪರಾ ಭವತಿ ತನ್ಮಾತಾ ॥**

ವ್ಯಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಪರಸ್ತ್ರೀಯರಿಂದ ವಿಮುಖನು ಪವಿತ್ರ ಅಂಗದವನು, ಪುತ್ರ ಮತ್ತು ಧನ ಸಂಗ್ರಹ ನಿರತನು, ಆತನ ತಾಯಿಯು ಕೆಟ್ಟಮಾತುಗಳನ್ನು ಆಡುತ್ತಾಳೆ.

**ಯವನಜಾತಕ**

**ಸುತಯುತೋ ಧನಸಂಗ್ರಹತತ್ಪರಃ ಪರಜನಾನುರತಃ ಪರಕಾರ್ಯಕೃತ್ ।**
**ವ್ಯಯಪತೌ ದಶಮೇ ಜನನೀಖಲೋ ಭವತಿ ದುರ್ವಚನಾನುರತಃ ಸದಾ ॥**

ವ್ಯಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಪುತ್ರರಿಂದ ಕೂಡಿರುತ್ತಾನೆ, ಧನಸಂಗ್ರಹದಲ್ಲಿ ತತ್ಪರನು, ಅನ್ಯಜನರಲ್ಲಿ ಅನುರಾಗ ಉಳ್ಳವನು ಮತ್ತು ಪರಕಾರ್ಯ ಮಾಡುತ್ತಾನೆ, ತಾಯಿಯಲ್ಲಿ ದಯೆ ಇಲ್ಲದವನು ಮತ್ತು ಕೆಟ್ಟ ಮಾತುಗಳನ್ನು ಆಡುವುದರಿಂದ ನಿರತನು ಆಗುತ್ತಾನೆ.

ಅನುಭವದಲ್ಲಿ - ವ್ಯಯೇಶನು ದಶಮಭಾವದಲ್ಲಿ ಇದ್ದಾಗ ಜಾತಕನು ಕರ್ಮ ಕ್ಷೇತ್ರದಲ್ಲಿ ಅಭಿವೃದ್ಧಿಗೋಸ್ಕರ ದುಡಿಯುತ್ತಾನೆ, ಆದರೆ ಸರಕುಗಳ ಕ್ರಯದಲ್ಲಿ ಏರಿಳಿತ ಅಥವಾ ಹಾಳಾಗುವುದರಿಂದ ಲಾಭದ ಅಂಶ ಕಮ್ಮಿಯಾಗುತ್ತದೆ, ಸಾಲದ ವ್ಯಾಪಾರದಲ್ಲಿ ಕೆಲವು ಗಿರಾಕಿಗಳಿಂದ ನಷ್ಟ ಸಂಭವಿಸುತ್ತದೆ, ಇವರು ದೈನಂದಿಕ ವ್ಯವಹಾರದಲ್ಲಿ ಆಲಸ್ಯತನದಿಂದ ಕಾರ್ಯ ಕಲಾಪಗಳನ್ನು ಮುಂದೂಡುವುದರಿಂದ ನಷ್ಟಕ್ಕೀಡಾಗುತ್ತಾರೆ.

# ೧೪೩. ಏಕಾದಶಭಾವಗತ ವ್ಯಯೇಶಫಲ

**ಪರಾಶರಹೋರಾ**

> **ವ್ಯಯೇಶೇ ಲಾಭಭಾವಸ್ಥೇ ಲಾಭೇ ಹಾನಿಃ ಪ್ರಜಾಯತೇ ।**
> **ಪರೇಣ ರಕ್ಷಿತಂ ದ್ರವ್ಯಂ ಕದಾಚಿಲ್ಲಭತೇ ನರಃ ॥**

ವ್ಯಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನಿಗೆ ಲಾಭ ಹಾನಿ ಆಗುತ್ತದೆ, ಪರರಿಂದ ರಕ್ಷಿತನು ಮತ್ತೆ ಕೆಲವು ಸಲ ಧನ ಲಭಿಸುತ್ತದೆ.

**ಮಾನಸಾಗರೀ**

> **ದ್ವಾದಶಪೇ ಲಾಭಸ್ಥೇ ದ್ರವಿಣಪತಿರ್ದೀರ್ಘಜೀವಿತೋ ಭವತಿ ।**
> **ಸ್ಥಾನಪ್ರವರೋ ದಾತಾ ವಿಖ್ಯಾತಃ ಸತ್ಯವಚನಪರಃ ॥**

ವ್ಯಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನವಂತನು, ದೀರ್ಘಾಯುವು ಮತ್ತು ತಾನಿರುವಲ್ಲಿ ಶ್ರೇಷ್ಠದಾನಿಯು, ಪ್ರಖ್ಯಾತನು, ಸತ್ಯವಾದಿಯು ಮತ್ತು ಕೊಟ್ಟ ಮಾತಿನಂತೆ ನಡೆಯುತ್ತಾನೆ.

**ಯವನಜಾತಕ**

> **ಧನಯುತೋ ಬಹುಜೀವಿತಯುಕ್ಪುಮಾನ್ನತ ಖಲಃ ಪ್ರಮದಶ್ಚ ಉದಾರಧೀಃ ।**
> **ವ್ಯಯಪತೌ ಭವಗೇ ಸತಿ ಸತ್ಯ ವಾಕ್ಸಕಲಕಾರ್ಯಕರಃ ಪ್ರಿಯವಾಗ್ಭವೇತ್ ॥**

ವ್ಯಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನವಂತನು, ದೀರ್ಘ ಕಾಲ ಜೀವಿಸುವ ಪುರುಷನು, ಇವನು ದುಷ್ಟನು ಆಗಿರುವುದಿಲ್ಲ, ಸಂತೋಷಚಿತ್ತದವನು, ಉದಾರಬುದ್ಧಿಯವನು ಸತ್ಯಮಾತುಗಳನ್ನು ಆಡುವವನು, ಎಲ್ಲ ಕೆಲಸವನ್ನು ಮಾಡುವವನು ಮತ್ತು ಪ್ರಿಯವಾದ ಮಾತುಗಳನ್ನು ಆಡುವವನು ಆಗಿರುತ್ತಾನೆ.

ಅನುಭವದಲ್ಲಿ - ವ್ಯಯೇಶನು ಲಾಭಭಾವದಲ್ಲಿ ಇದ್ದಾಗ ಜಾತಕನು ಧನವಂತನು, ದೀರ್ಘಾಯುವು, ಉದಾರನು, ಭೂಮಿ ಮತ್ತು ವಾಹನ ಖರೀದಿಯಿಂದ ಆರ್ಥಿಕ ಒತ್ತಡಕ್ಕೆ ಈಡಾಗುತ್ತಾನೆ, ಆದರೆ ಜಾತಕನು ವ್ಯಾಪಾರ-ವ್ಯವಹಾರವನ್ನು ಚತುರತೆಯಿಂದ ನಿರ್ವಹಿಸಿ, ಅಲ್ಪಕಾಲದಲ್ಲಿ ಆರ್ಥಿಕ ಅಭಿವೃದ್ಧಿ ಹೊಂದುತ್ತಾನೆ.

# ೧೪೪. ವ್ಯಯಭಾವಗತ ವ್ಯಯೇಶಫಲ

**ಪರಾಶರಹೋರಾ**

ವ್ಯಯೇಶೇ ವ್ಯಯಭಾವಸ್ಥೇ ವ್ಯಯಾಧಿಕ್ಯಂ ಹಿ ಜಾಯತೇ ।
ನ ಶರೀರಸುಖಂ ತಸ್ಯ ಕ್ರೋಧೀ ದ್ವೇಷಪರೋ ನೃಣಾಮ್ ॥

ವ್ಯಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನಿಗೆ ಅಧಿಕವ್ಯಯ ಆಗುತ್ತದೆ, ಶರೀರಸುಖ ಇರುವುದಿಲ್ಲ, ಕೋಪಿಷ್ಠನು ಮತ್ತು ದ್ವೇಷ ಉಳ್ಳವನು ಆಗುತ್ತಾನೆ.

**ಮಾನಸಾಗರೀ**

ವಿಭೂತಿಮಾನ್ ಗ್ರಾಮನಿವಾಸಚಿತ್ತ: ಕಾರ್ಪಣ್ಯ ಬುದ್ಧಿ: ಪಶುಸಂಗ್ರಹೀ ಚ ।
ಚೇಜ್ಜೀವತಿ ಗ್ರಾಮಯುತಃ ಸದಾ ಸ್ಯಾದ್ವ್ಯಯಾಧಿನಾಥೇ ವ್ಯಯಗೇಹಲೀನೇ ॥

ವ್ಯಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಧನ-ಸಂಪನ್ನನು, ಗ್ರಾಮದಲ್ಲಿ ವಾಸಿಸುವ ಮನಸ್ಸುಳ್ಳವನು ಕೃಪಣನು ಪಶುಸಂಗ್ರಹ ಉಳ್ಳವನು ಮತ್ತು ಗ್ರಾಮದಲ್ಲಿ ವಾಸಿಸುತ್ತಾನೆ.

**ಯವನಜಾತಕ**

ಭವತಿ ಬುದ್ಧಿಯುತಃ ಕೃಪಣಃ ಖಲಃ ಪರನಿವಾಸರತಃ ಸ್ಥಿರಕಾರ್ಯಕೃತ್ ।
ಪಶುಜನೈಶ್ಚ ರತೋ ಬಹುಭೋಜನೋ ವ್ಯಯಪತೌ ವ್ಯಯಗೇ ಸತಿ ಮಾನವಃ ॥

ವ್ಯಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಬುದ್ಧಿಯುತನು ಆಗುತ್ತಾನೆ, ಕೃಪಣನು, ದುಷ್ಟನು, ಅನ್ಯರ ಮನೆಯಲ್ಲಿ ವಾಸಿಸುವವನು ಸ್ಥಿರವಾದ ಕೆಲಸ ಮಾಡುತ್ತಾನೆ, ಅನ್ಯ ಜನರ ವಾಸಸ್ಥಳದಲ್ಲಿ ಇರುತ್ತಾನೆ, ಪಶುಪಾಲನೆಯಲ್ಲಿ ನಿರತನು ಮತ್ತು ತುಂಬಾ ಊಟ ಮಾಡುವವನು ಆಗಿರುತ್ತಾನೆ.

ಅನುಭವದಲ್ಲಿ - ವ್ಯಯೇಶನು ವ್ಯಯಭಾವದಲ್ಲಿ ಇದ್ದಾಗ ಜಾತಕನು ಹೆಚ್ಚು ವ್ಯಯ ಮಾಡುತ್ತಾನೆ, ಶೀಘ್ರಕೋಪಿ, ಕೃಪಣನು, ಪಶುಪಾಲನೆಯಲ್ಲಿ ಆಸಕ್ತನು ಆಗುತ್ತಾನೆ. ವ್ಯಯೇಶನು ಪಾಪಗ್ರಹನಾದರೆ ನಿದ್ರಾನಾಶ ಮತ್ತು ಕಾಲುನೋವು ಉಂಟಾಗುತ್ತದೆ.

# 1. ಜ್ಯೋತಿಷ ಬೋಧಿನಿ
## ( ಚತುರ್ಥಾವೃತ್ತಿ )
## ಉತ್ತಮ ಪ್ರಾಥಮಿಕ ಜ್ಯೋತಿಷ ಗ್ರಂಥ

ಗ್ರಹ-ರಾಶಿ ಸಂಬಂಧ, ನಕ್ಷತ್ರ ವಿಚಾರ, ರಾಶಿಯ ಗುಣ-ಧರ್ಮ, ಸೌರವ್ಯೂಹ, ಗ್ರಹ-ಕಾರಕತ್ವ, ಸ್ವರೂಪ, ಬಲ, ರೋಗವಿಚಾರ, ದೃಷ್ಟಿ, ಮಿತ್ರತ್ವ, ಷಡ್ಬಲ, ದಶವರ್ಗ ಅವಸ್ಥಾಫಲ, ಭಾವ, ಭಾವಫಲ, ದ್ರೇಕ್ಕಾಣದಿಂದ ಕಾಲಪುರುಷನ ಅಂಗವಿಭಾಗ, ಆಯುರ್ದಾಯ, ರಾಶಿಸ್ಥಿತ ಗ್ರಹಫಲ, ಗುಳಿಕ (ಮಾಂದಿ) ಉಪಗ್ರಹರು, ದ್ವಿಗ್ರಹಯೋಗ, ಕರ್ಮ ಅಥವಾ ವೃತ್ತಿ, ದಶಾಫಲ, ಬಾಧಕಸ್ಥಾನ, ಯೋಗಗಳು, ಗೋಚರಫಲ, ಅಷ್ಟಕವರ್ಗ ಪದ್ಧತಿ ಪ್ರಶ್ನಶಾಸ್ತ್ರ, ಶುಭಾಶುಭಗ್ರಹ ವಿವೇಚನೆ ಇತ್ಯಾದಿ ಉಪಯುಕ್ತ ಹಾಗೂ ಬೋಧಪ್ರದ ಪಾರಂಭಿಕ ಪಾಠಗಳಿಂದ ಕೂಡಿದ ಈ ಜ್ಯೋತಿಷ ಭೋಧಿನೀ ಗ್ರಂಥವು ಶಾಸ್ತ್ರಜ್ಞಾನ ಪ್ರವೇಶಕ್ಕೆ ಸಹಾಯಕ ಆಗಿರುತ್ತದೆ.

ಪುಟ 147 — ಬೆಲೆ ರೂ. 32-00

# 2. ಮೇಳಾ-ಮೇಳಿ
## ( ವಧೂವರರ ಜ್ಯೋತಿಷ ಗ್ರಂಥ )
## ( ತೃತೀಯಾವೃತ್ತಿ )

ಜಾತಕ ಘಟನೆಯಲ್ಲಿ ಉಪಯುಕ್ತ ೧೮ ಕೂಟಗಳ ವಿವೇಚನೆ ಬಲಾಬಲ ಪರಿಶೀಲನೆ, ದಶಾಸಂಧಿ ವಿಚಾರ, ಕುಜದೋಷ ಮತ್ತು ಅಪವಾದ, ಯೋಗಾವಳಿ, ವೈಧವ್ಯಯೋಗ, ವಿವಾಹ ಮುಹೂರ್ತ, ವಿವಾಹಕಾಲದ ಗ್ರಹಸ್ಥಿತಿ, ಸಪ್ತಮಭಾವ ವಿಚಾರ, ಕಳತ್ರನಾಶಯೋಗ, ದ್ವಿಭಾರ್ಯಾಯೋಗ, ಪ್ರೇಮವಿವಾಹ, ಅಂತರ್ಜಾತೀಯ ವಿವಾಹ, ವಿವಾಹಕಾಲ, ಋಣಾನುಬಂಧ, ಇತ್ಯಾದಿ ವಿಚಾರ ಮಾದರಿ ಜಾತಕ ಮತ್ತು ಆಧಾರ ಶ್ಲೋಕಗಳಿಂದ ವಿವರಿಸಿ ಬರೆದಿರುತ್ತದೆ, ವಿವಾಹ ಪ್ರಶ್ನವಿಚಾರ ಪ್ರಶ್ನಮಾರ್ಗ ಗ್ರಂಥದ ಅಧ್ಯಾಯ ೧೩ ಮತ್ತು ೨೦ರ ಕೆಲವು ಮೂಲಶ್ಲೋಕ ಮತ್ತು ಅನುವಾದವನ್ನು ವಿದ್ಯಾರ್ಥಿಗಳಿಗೆ ಉಪಯುಕ್ತ ಆಗುವಂತೆ ಬರೆದಿರುತ್ತದೆ. ಸುಗಮ ದಾಂಪತ್ಯ ಜೀವನಕ್ಕೆ ಉಪಯುಕ್ತ ಅದ್ವಿತೀಯ ಜ್ಯೋತಿಷ ಗ್ರಂಥ.

ಪುಟ 148 — ಬೆಲೆ ರೂ. 54-00

## 4. ಗುಳಿಕ ( ಮಾಂದಿ ) ಉಪಗ್ರಹರು

ಗುಳಿಕ ಸ್ವರೂಪ, ಗುಳಿಕ ಶೋಧನೆ, ಲಗ್ನಾದಿ ಭಾವಸ್ಥಿತ ಮಾಂದಿಫಲ, ದತ್ತಪುತ್ರಯೋಗ, ಸಂತಾನ ದೋಷ, ಗುಳಿಕನಿಂದ ಸೂಚಿತರೋಗಗಳು, ಅವಸಾನಕಾಲ, ಗುಳಿಕಯುತಿಫಲ, ಉಪಗ್ರಹರು, ಹಾಗೂ ಅವರಿಂದ-ಸೂಚಿತಫಲ, ಲಗ್ನಸ್ಫುಟ ಮತ್ತು ಗ್ರಹಸ್ಫುಟಸಾಧನೆ, ಉಪಗ್ರಹಶೋಧನೆ, ಗುಳಿಕ-ರೋಗಪ್ರಶ್ನೆ, ಜನನ ಕಾಲದ ಜಾತಕ ತಯಾರಿಸುವ ಕ್ರಮ, ಆರೂಢ (ಪದ) ಸಾಧನೆ ಮತ್ತು ಫಲ, ಆತ್ಮಕಾರಕ ಗ್ರಹ, ಕಾರಕಾಂಶ ಫಲ ಇತ್ಯಾದಿ ವಿಚಾರ ಮಾದರಿ ಜಾತಕ, ಮತ್ತು ಪರಾಶರಹೋರಾ ಫಲದೀಪಿಕಾ, ಪ್ರಶ್ನಮಾರ್ಗ ಮೊದಲಾದ ಪ್ರಾಚೀನ ಗ್ರಂಥಗಳಿಂದ ಆಯ್ದ ಶ್ಲೋಕಗಳನ್ನು ವಿವರಿಸಿ ಬರೆದ ಈ ಚಿಕ್ಕ ಗ್ರಂಥವು ಜ್ಯೋತಿಷ ವಿದ್ಯಾರ್ಥಿಗಳಿಗೆ ಉಪಯುಕ್ತ ಆಗಿರುತ್ತದೆ.

ಪುಟ 124 ಬೆಲೆ ರೂ. 48-00

## 10. ಸಾರಾವಲೀ ( ದ್ವಿತೀಯ ಭಾಗ )

ಚಂದ್ರಯೋಗಗಳು - 35, ಸುನಫಾ, ದುರಧರಾ, ಕೇಮದ್ರುಮ, ವಸುಮತೀ ಆದಿಯೋಗ ಮತ್ತು ಧನಯೋಗ, ಸೂರ್ಯಯೋಗ-12, ವೇಶಿ-ವಾಶಿ ಮತ್ತು ಉಭಯಚರಿಯೋಗಗಳು. ದ್ವಿಗ್ರಹಯೋಗಗಳು-23, ತ್ರಿಗ್ರಹಯೋಗಗಳು-38, ಚತುಗ್ರಹಯೋಗಗಳು-35. ಪಂಚಗ್ರಹಯೋಗಗಳು-22, ಷಟ್‌ಗ್ರಹಯೋಗಗಳು-8. ಸಪ್ತಗ್ರಹಯೋಗ, ಬೃಹಜ್ಜಾತಕ ದ್ವಿಗ್ರಹಯೋಗ, ಪ್ರವ್ರಜ್ಯಾಯೋಗ (ಸಂನ್ಯಾಸಯೋಗಗಳು-37. ನಾಭಸಯೋಗಗಳು 32. (ನೌಯೋಗ, ಛತ್ರಯೋಗ, ಕೂಟಯೋಗ, ಕಾರ್ಮುಕಯೋಗ (ಚಾಪಯೋಗ), ಅರ್ಧ ಚಂದ್ರ ಯೋಗ, ವಜ್ರಯೋಗ, ಯುವಯೋಗ, ಕಮಲಯೋಗ, ವಾಪೀಯೋಗ, ಶಕಟಯೋಗ, ವಿಹಗಯೋಗ, ಗದಾಯೋಗ, ಶೃಜ್ಞಾಟಕಯೋಗ, ಹಲಯೋಗ, ಚಕ್ರಯೋಗ, ಸಮುದ್ರಯೋಗ, ಯೂಪಯೋಗ, ಶರಯೋಗ, ಶಕ್ತಿಯೋಗ, ದಂಡಯೋಗ, ಮಾಲಾಯೋಗ, ಸರ್ಪಯೋಗ, ರಜ್ಜುಯೋಗ, ಮುಸಲಯೋಗ, ನಲಯೋಗ, ಗೋಲಯೋಗ, ಯುಗಯೋಗ, ಶೂಲಯೋಗ, ಕೇದಾರಯೋಗ, ಪಾಶಯೋಗ, ದಾಮಿನಿಯೋಗ, ವೀಣಾಯೋಗ) ಆದಿತ್ಯಚಾರ-ದೃಷ್ಟಿಯೋಗ, (ಮೇಷಾದಿ ದ್ವಾದಶರಾಶಿಸ್ಥಿತ ಸೂರ್ಯನ ಫಲ) ಚಂದ್ರಚಾರ ದೃಷ್ಟಿಯೋಗ, (ಮೇಷಾದಿ ದ್ವಾದಶರಾಶಿಸ್ಥಿತ ಚಂದ್ರನ ಫಲ). ಚಂದ್ರನವಾಂಶಚಾರಾಧ್ಯಾಯ

12 ಅಧ್ಯಾಯಗಳು (437 ಶ್ಲೋಕಗಳು) ಪುಟ 122 ಬೆಲೆ ರೂ. 50-00

## 8. ಶಕುನ ಮತ್ತು ಸ್ವಪ್ನಫಲ

ತಾತ್ಕಾಲಿಕ ಶಕುನಗಳಿಂದ ಪ್ರಶ್ನಕಾಲದ ಫಲಾಫಲ ನಿರ್ಣಯ, ಶುಭ ಮತ್ತು ಅಶುಭಶಕುನಗಳು, ದೀಪದ ಶುಭಾ-ಶುಭ ಲಕ್ಷಣ, ಪ್ರಾಣಿಗಳಿಂದ ಸೂಚಿತ ಶಕುನಗಳು, ಅಶುಭಶಕುನ ಪರಿಹಾರ ವೀಳ್ಯದೆಲೆ ಇತ್ಯಾದಿ ದ್ರವ್ಯಲಕ್ಷಣ, ಕಾರ್ಯಸಫಲತೆಯ ಲಕ್ಷಣ, ಅಂಗಚೇಷ್ಟೆ, ವಿವಾದ, ವಿವಾಹ, ರೋಗ, ಯಾತ್ರೆ, ಸಂತಾನಾದಿ ಪ್ರಶ್ನೆಯ ಶಕುನ, ರೋಗಿಯ ಮರಣಸೂಚಕ ನಿಮಿತ್ತ, ಇತ್ಯಾದಿ ಪ್ರಶ್ನಮಾರ್ಗ ಗ್ರಂಥದಿಂದ ಆಯ್ದ ಶ್ಲೋಕಗಳು ಮತ್ತು ಅಧ್ಯಾಯ ೩-೪ರ ಶ್ಲೋಕಾನುವಾದದಿಂದ ಕೂಡಿರುತ್ತದೆ.

ಸ್ವಪ್ನಭೇಧ, ಸ್ವಪ್ನಫಲ, ಪ್ರಾಪ್ತಿಕಾಲ, ಶುಭಾಶುಭ ಕನಸುಗಳು, ದುಃಸ್ವಪ್ನ ಪರಿಹಾರ ವಿಧಾನ, ಕನಸಿನ ಫಲಪ್ರಾಪ್ತಿಕಾಲ, ಪ್ರಶ್ನಮಾರ್ಗ ಅಧ್ಯಾಯ ೩೧ ಮತ್ತು ರಾಮಾಯಣ ಅಯೋಧ್ಯಾಕಾಂಡದಿಂದ ಆಯ್ದ ಶ್ಲೋಕಗಳಿಂದ ವಿವರಿಸಿ ಬರೆದಿರುತ್ತದೆ.

ಪುಟ 112      ಬೆಲೆ ರೂ. 8-00

## ಸಾರಾವಲೀ - ( ತೃತೀಯ ಭಾಗ ) ( ಅಚ್ಚಿನಲ್ಲಿ )

ದೈವಜ್ಞ ಕಲ್ಯಾಣವರ್ಮ ವಿರಚಿತ ಸಾರಾವಲೀ ಗ್ರಂಥದ ಹತ್ತು ಅಧ್ಯಾಯಗಳ (25ನೇ ಅಧ್ಯಾಯದಿಂದ 34ನೇ ಅಧ್ಯಾಯತನಕ) ಮೂಲಶ್ಲೋಕ ಮತ್ತು ಅನುವಾದವನ್ನು ಈಗ ಅಚ್ಚಿನಲ್ಲಿರುವ ಮೂರನೇ ಭಾಗದಲ್ಲಿ ವಿವರಿಸಿ ಬರೆದಿರುತ್ತದೆ.

## ಸಾರಾವಲೀ 25ರಿಂದ 34 ಅಧ್ಯಾಯಗಳು

25. ಕುಜಚಾರಾಧ್ಯಾಯ 26. ಬುಧಚಾರಾಧ್ಯಾಯ 27. ಗುರುಚಾರಾಧ್ಯಾಯ 28. ಶುಕ್ರಚಾರಾಧ್ಯಾಯ 29. ಶನಿಚಾರಾಧ್ಯಾಯ 30. ಸೂರ್ಯಾದಿ ಸಪ್ತಗ್ರಹರ ಭಾವಸ್ಥಿತಫಲ 31. ಕೇಂದ್ರಸ್ಥಿತ ದ್ವಿಗ್ರಹಾದಿಯೋಗ 32. ಭಾಗ್ಯಭಾವ ಮತ್ತು ವಿಶೇಷಫಲ 33. ದಶಮಭಾವ ವಿಶೇಷಫಲ 34. ಲೋಕಯಾತ್ರಾಧ್ಯಾಯ. ಇತ್ಯಾದಿ ಉಪಯುಕ್ತ ವಿಚಾರಗಳಿಂದ ಕೂಡಿದ ಉತ್ತಮ ಫಲಜ್ಯೋತಿಷ ಗ್ರಂಥ

॥ ಅಚ್ಚಿನಲ್ಲಿದೆ ॥

ದೈವಜ್ಞ ಕಲ್ಯಾಣವರ್ಮ ವಿರಚಿತ ಸಾರಾವಲೀ ಗ್ರಂಥವು ಜ್ಯೋತಿಷಶಾಸ್ತ್ರದ ಅಧ್ಯಯನಕ್ಕೆ ಅತ್ಯಂತ ಉಪಯುಕ್ತ ಗ್ರಂಥ ಆಗಿರುತ್ತದೆ. ಸಾರಾವಲೀ ಗ್ರಂಥದ ಮೊದಲನೇ 12 ಅಧ್ಯಾಯಗಳ 425 ಮೂಲಶ್ಲೋಕ ಮತ್ತು ಅನುವಾದವನ್ನು ಪ್ರಥಮವಾಗಿ ಈ ಗ್ರಂಥದಲ್ಲಿ ಪ್ರಕಾಶಿಸಿರುತ್ತೇವೆ.

1. ಶಾಸ್ತ್ರವತಾರ ಅಧ್ಯಾಯ (ಸೂರ್ಯನ ಪ್ರಾಮುಖ್ಯತೆ ಮತ್ತು ಪ್ರಾರ್ಥನೆ) 2. ಹೋರಾಶಬ್ದಾರ್ಥಚಿಂತಾ ಅಧ್ಯಾಯ, (ಹೋರಾಶಬ್ದ ಪ್ರಾಮುಖ್ಯತೆ ಮತ್ತು ಉಪಯುಕ್ತತೆ) 3. ರಾಶಿಭೇದ ಅಧ್ಯಾಯ, (ರಾಶಿ ಸ್ವರೂಪಾದಿ ಗುಣ ಧರ್ಮ ಮತ್ತು ಗ್ರಹ ಉಚ್ಚಾದಿ ವರ್ಗ) 4. ಗ್ರಹಗುಣಾಧ್ಯಾಯ. (ಗ್ರಹರ ದೀಪ್ತಾದಿ ಅವಸ್ಥೆ, ದಶಾವಿಭಾಗ) 5. ಮಿಶ್ರಕಾಧ್ಯಾಯ 6. ಯೋಗಕಾರಕಾಧ್ಯಾಯ, (ಪರಸ್ಪರ ಕೇಂದ್ರಗತ ಕಾರಕಗ್ರಹಫಲ) 7. ಕಾರಕಾಧ್ಯಾಯ. (ಕಾಲಗಣನೆ, ಗ್ರಹರದೃಷ್ಟ್ಯಾದಿ) 8. ಆಧಾನಾಧ್ಯಾಯ, ಗರ್ಭವಿಚಾರ ಅವಳಿ, ತ್ರಿವಳಿ ಮತ್ತು ವಿಕೃತ ಜನನ) 9. ಜನ್ಮ ವಿಧಾನಾಧ್ಯಾಯ, (ಪ್ರಸವ ವಿಧಾನ ಶಿಶುವಿನ ಆಕೃತಿ ಆದಿ) 10. ಅರಿಷ್ಟಾಧ್ಯಾಯ, (ಸದ್ಯೋಮರಣಾದಿ ಅರಿಷ್ಟಯೋಗ, ಚಂದ್ರನ ಮೃತ್ಯುಭಾಗಾದಿ) 11. ಚಂದ್ರಾರಿಷ್ಟಭಂಗಾಧ್ಯಾಯ (ಚಂದ್ರನ ಸಂಬಂಧ, ಶಾಂತಿ ದೃಷ್ಟ್ಯಾತ್ಯಾದಿ) 12. ಸಕಲಾರಿಷ್ಟಭಂಗಾಧ್ಯಾಯ. (ಬಲಿಷ್ಠ ಗುರು ಶುಭಗ್ರಹರಿಂದ ಮತ್ತು 3, 6, 11ರ ಪಾಪಗ್ರಹರಿಂದ ಅರಿಷ್ಟಭಂಗ)

ಇತಿ ಸಾರಾವಲೀ 12 ಅಧ್ಯಾಯಗಳು (425 ಶ್ಲೋಕಗಳು) ಪುಟ: 105 ಬೆಲೆ ರೂ. 40-00

## ಫಲದೀಪಿಕಾ

ಮಂತ್ರೇಶ್ವರಮುನಿ ಪ್ರಣೀತ ಫಲಜ್ಯೋತಿಷ ಗ್ರಂಥದ ಭಾವಾನುವಾದ, 1. ಸಂಜ್ಞಾಧ್ಯಾಯ, 2. ಕಾರಕಾಧ್ಯಾಯ, 3. ವರ್ಗ ಸಂಜ್ಞಾಧ್ಯಾಯ, 4. ಷಡ್ಬಲ, 5. ಕರ್ಮಾಜೀವ, 6. ಯೋಗ ವಿಚಾರ 7. ರಾಜಯೋಗ, 8. ಭಾವಸ್ಥಿತಗ್ರಹ ಫಲ, 9. ಲಗ್ನಫಲ, 10. ಕಳತ್ರಭಾವ, 11. ಸ್ತ್ರೀಜಾತಕ, 12. ಸಂತಾನಚಿಂತೆ, 13. ಆಯುರ್ಭಾವ, ಮೊದಲಾದ ವಿಚಾರಗಳನ್ನು ಆಧಾರಶ್ಲೋಕ ಮತ್ತು ಟಿಪ್ಪಣಿಯಿಂದ ವಿವರಿಸಿ ಬರೆದಿರುತ್ತದೆ. ಉತ್ತಮ ಫಲ ಜ್ಯೋತಿಷ ಗ್ರಂಥ. ಅಧ್ಯಾಯ 14. ರೋಗ, ಮರಣ, ಪೂರ್ವ-ಭವಿಷ್ಯ ಜನ್ಮಚಿಂತೆ, 15. ಭಾವಚಿಂತೆ, 16. ಲಗ್ನಾದಿ ದ್ವಾದಶಭಾವಫಲ, 17. ನಿರ್ಯಾಣ ಪ್ರಕರಣ, 18. ದ್ವಿಗ್ರಹ ಯೋಗ, 19. ದಶಾಫಲ, 20. ದಶಾಭುಕ್ತಿ ಫಲ, 21. ಭುಕ್ತಿ-ಅಂತರ್ಭುಕ್ತಿ ಫಲ, 22. ಕಾಲಚಕ್ರದಶೆ, 23. ಅಷ್ಟಕ ವರ್ಗ, 24. ಹೋರಾಸಾರೋಕ್ತ ಅಷ್ಟಕವರ್ಗ, 25. ಪ್ರವ್ರಜ್ಯಾಯೋಗ ಮೊದಲಾದ ವಿಚಾರಗಳನ್ನು ಆಧಾರಶ್ಲೋಕ ಮತ್ತು ಟಿಪ್ಪಣಿಯಿಂದ ಭಾವಾನುವಾದವನ್ನು ವಿವರಿಸಿ ಬರೆದಿರುತ್ತದೆ. ಫಲಜ್ಯೋತಿಷದ ಅದ್ವಿತೀಯ ಗ್ರಂಥ.

ಪುಟ 286 ಬೆಲೆ: ರೂ. 64-00

## ಷಟ್ ಪಂಚಾಶಿಕಾ ( ಭಾವಫಲ ಸಹಿತ )

ವರಾಹಮಿಹಿರಾಚಾರ್ಯರ ಪುತ್ರ ದೈವಜ್ಞ ಪೃಥುಯಶಾ ಕೃತ ಪ್ರಶ್ನ ಶಾಸ್ತ್ರ ಗ್ರಂಥದ [illegible]ನುವಾದ, ಉತ್ಪಲಭಟ್ಟನ ಟೀಕೆ ಮತ್ತು ಪ್ರಾಚೀನ ಜ್ಯೋತಿಷ ಗ್ರಂಥಗಳಿಂದ ಆಯ್ದು [illegible]ಯಿಂದ ಕೂಡಿದ ಪ್ರಶ್ನಶಾಸ್ತ್ರದ ಅದ್ವಿತೀಯ ಗ್ರಂಥ, ಪ್ರಶ್ನಕಾಲದ ಶುಭಾಶುಭ ಫಲ ನಿರ್ಣಯಕ್ಕೆ ಉಪಯುಕ್ತ ಆಗುವಂತೆ ಪ್ರಶ್ನಮಾರ್ಗ ಅಧ್ಯಾಯ ೧೪-ಭಾವಫಲಾಧ್ಯಾಯ ಮತ್ತು ಅಧ್ಯಾಯ ೨೩ರಲ್ಲಿ ಹೇಳಿದ ಭೋಜನ ಪ್ರಶ್ನೆಯ ವಿಚಾರ ವಿವರಿಸಿ ಬರೆದಿರುತ್ತದೆ.